

ತಂತ್ರಗಾರ

# ಕರಟಕರಾಯ

ಬರೆದವರು: 'ನಾ'

ಸಮಾಜ ಪುಸ್ತಕಾಲಯ

ತಂತ್ರಗಾರ

# ಕರಟಕರಾಯ

[ ನರಿಯಣ್ಣನ ಕತೆ ]

ಬರೆದವರು : ‘ ನಾ ’

ಪ್ರಥಮ ಮುದ್ರಣ ೧೯೪೩ ● ದ್ವಿತೀಯ ಮುದ್ರಣ ೧೯೫೬

ಬೆಲೆ : ಎಂಟಾಣೆ

ಸಮಾಜ ಪುಸ್ತಕಾಲಯ, ಧಾರವಾಡ

# ಒಂದು ಮಾತು

ಇದು ಮೊದಲು ಶ್ರೀ.ಶಂ.ಬಾ. ಜೋಶಿಯವರ ಸರಸ್ವತೀಭಾಂಡಾಗಾರದ ಪ್ರಕಟನೆಯಾಗಿತ್ತು. ಪ್ರಥಮಾವೃತ್ತಿಯ ಪ್ರತಿಗಳೆಲ್ಲ ಮುಗಿದು ಬಹಳ ದಿವಸಗಳಾಗಿದ್ದರೂ ಹೊಸ ಆವೃತ್ತಿ ಹೊರಬಿದ್ದಿರಲಿಲ್ಲ.

ಸರಸ್ವತೀ ಭಾಂಡಾಗಾರದ ಪ್ರಕಟನೆಯ ಮಾರಾಟದ ಹೊಣೆ ಹೊತ್ತ ನನಗೇ ಶ್ರೀಯುತರು ತಮ್ಮ ತೀರಿದ ಪ್ರಕಟನೆಗಳ ಹೊಸ ಆವೃತ್ತಿಯನ್ನು ಪ್ರಕಟಿಸಲು ಅನುಮತಿ ಇತ್ತದ್ದರಿಂದ ಇದೀಗ ಈ ಪುಟ್ಟ ಪುಸ್ತಕದ ಹೊಸ ಆವೃತ್ತಿಯನ್ನು ಬೆಳಕಿಗೆ ತಂದಿದ್ದೇವೆ.

ಇದರ ಲೇಖಕರಿಗೂ, ಶ್ರೀ. ಶಂ. ಬಾ. ಜೋಶಿಯವರಿಗೂ ಮತ್ತು ಮೊದಲ ಮುದ್ರಣಕ್ಕೆ ಪ್ರೋತ್ಸಾಹನವನ್ನಿತ್ತ ವಾಚಕರಿಗೂ ಕೃತಜ್ಞರಾಗಿದ್ದೇವೆ.

ತಾ॥ ೧—೭—೧೯೫೭ ಪ್ರಕಾಶಕ

C 50894

ಮುದ್ರಕರು : ಪ್ರಕಾಶಕರು
ಭಾಲಚಂದ್ರ ವೆಂಕಟೇಶ ಘಾಣೇಕರ
**ಪ್ರತಿಭಾ ಮುದ್ರಣ, ಧಾರವಾಡ**

# ಮುನ್ನುಡಿ

ಮಕ್ಕಳು ಮೈ ಮನಗಳಿಂದ ಹಿಗ್ಗಬೇಕೆಂದು ಯಾವ ತಂದೆ-ತಾಯಿಗಳು ಬಯಸುವುದಿಲ್ಲ? ಆದರೆ ಬರಿ ಬಯಸಿ ಆಗುವುದೇನು? ಮೈತುಂಬಿದವರಾಗ ಬೇಕೆಂದು ಉಣ್ಣಲು ತಿನ್ನಲು ಕೊಡುವಂತೆ, ಮಕ್ಕಳ ಹೃದಯ ಬುದ್ಧಿಗಳು ವಿಶಾಲವಾಗುವುದಕ್ಕಾಗಿ, ಶಾಲೆಗೆ ಕಳುಹುವುದರ ಹೊರತಾಗಿ, ಒಂದು ಎಳ್ಳನಿತಾದರೂ ಚಿಂತಿಸುವವರು ಎಷ್ಟು ಮಂದಿ? ಶಾಲೆಯಲ್ಲಿ ಪಠ್ಯಪುಸ್ತಕಗಳ ಗಿಳಿಪಾಠಿಗೇ ಈವರೆಗೆ ಹೆಚ್ಚು ಮಹತ್ವವಿದ್ದಿತು. ಅದರಿಂದ ತರುಣರಲ್ಲಿ ಓದುವ ಪ್ರೀತಿಯು ಬೆಳೆಯುತ್ತಿದ್ದಿಲ್ಲ. ನಮ್ಮ ನಾಡಿನಲ್ಲಿ ಅಷ್ಟೇ ಅಲ್ಲ, ಇಂಗ್ಲಂಡಿನಲ್ಲೂ ಇದೇ ಹಾಡು ಇದ್ದಿತು. ಇದಕ್ಕಾಗಿ ಅಲ್ಲಿಯ ಶಿಕ್ಷಣ ಶಾಸ್ತ್ರಜ್ಞರ ಸಮಿತಿಯವರು ಕೂಲಂಕಷ ವಿಚಾರ ಮಾಡಿ, ಮಕ್ಕಳಲ್ಲಿ ಚಿಕ್ಕಂದಿನಿಂದಲೇ ಓದುವ ಅಭಿರುಚಿಯನ್ನು ಹುಟ್ಟಿರುವುದಕ್ಕಾಗಿ ಪಠ್ಯಪುಸ್ತಕಗಳ ಹೊರತು, ಸಾಮಾನ್ಯ ವಾಚನ ಪುಸ್ತಕಗಳನ್ನೂ ಶಾಲೆಯಲ್ಲಿ ತುಂಬ ಓದಲು ಹಚ್ಚಬೇಕೆಂದು ಸಲಹೆ ಕೊಟ್ಟರು.

ವಿದ್ಯಾರ್ಥಿಗಳಲ್ಲಿ ಶಾಲೆಬಿಟ್ಟಮೇಲೆ ಓದುವ ಅಭಿರುಚಿಯು ಉಳಿಯದಿರುವುದಕ್ಕೆ ಆ ಸಮಿತಿಯವರು ಕೆಲವು ಕಾರಣಗಳನ್ನು ಕಂಡುಹಿಡಿದಿದ್ದಾರೆ: (೧) ಚಿಕ್ಕಂದಿನಲ್ಲಿಯೇ ಓದುವ ಹದ ಗೊತ್ತಾಗುವುದಿಲ್ಲ. (೨) ಓದಿದ್ದು ಆನಂದಕ್ಕಾಗಿ ಇರುವುದಿಲ್ಲ; ಕೇವಲ ಪರೀಕ್ಷೆಗಾಗಿ! (೩) ಮೌನದಿಂದ (ಮನದಲ್ಲಿಯೇ) ಓದುವ ರೀತಿ ಗೊತ್ತಿರುವುದಿಲ್ಲ. (೪) ಓದಿದ್ದುದರಲ್ಲಿ ಮುಖ್ಯಾಂಶವಾವುದು, ಆ ಮುಖ್ಯ ಸಂಗತಿಯನ್ನು ಬಿಂಬಿಸುವುದಕ್ಕಾಗಿ ತಂದ ಉಳಿದ ಸಂಗತಿಗಳಾವವು ಎಂಬುದನ್ನು ಬೇರ್ಪಡಿಸಿ ಇಟ್ಟುಕೊಳ್ಳುವ ಬಗೆಯನ್ನು ತಿಳಿಸಿಕೊಟ್ಟಿರುವುದಿಲ್ಲ. ಇದರಿಂದ, ಮುಂದೆ ಪುಸ್ತಕಗಳಲ್ಲಿ ಪ್ರೀತಿಯೇ ಇಲ್ಲದಾಗುವುದು. ಪುಸ್ತಕಗಳ ಮೇಲೆ ಪ್ರೀತಿಯಿಲ್ಲದವನು, ಎಂತಹ ಪದವಿಯನ್ನು ಪಡೆದಿದ್ದರೂ ಆತನು ಸುಶಿಕ್ಷಿತನೆಂಬ ಹೆಸರಿಗೆ ಅರ್ಹನೆ ಅಲ್ಲ.

ಒಳಗಿನ ಸವಿಗಾಗಿ ಹುಡುಗರು ತಾವಾಗಿಯೇ ಓದಬೇಕು; ಇಂತಹ ಪುಸ್ತಕಗಳು ಮಕ್ಕಳ ಕಣ್ಣಿಗೆ ಬೀಳುವಂತೆ, ಕೈಗೆ ಸಿಕ್ಕುವಂತೆ ಶಿಕ್ಷಕರೂ, ಪಾಲಕರೂ ಯಾವಾಗಲೂ ಪ್ರಯತ್ನಪಡಬೇಕು. ಹಿಗ್ಗಿನಿಂದ ಓದಿದುದು

ಮನಸ್ಸನ್ನು ಹಿಗ್ಗಿಸದೆ ಇರದು. ಆದರೆ ಕನ್ನಡದಲ್ಲಿ ಇಂತಹ ಪುಸ್ತಕಗಳು ಇನ್ನೂ ಸಾಕಷ್ಟು ಪ್ರಕಟವಾಗಿಲ್ಲ. ಈ ಕೊರತೆಯನ್ನು ಹೋಗಲಾಡಿಸುವುದಕ್ಕಾಗಿಯೇ ನಾವು '**ಮಕ್ಕಳ ಹಿಗ್ಗು**' ಎಂಬ ಈ ಮಾಲೆಯನ್ನು ಹೊರಡಿಸಿದ್ದಾಗಿದೆ.

ಈಗ ಬೆಳಕಿಗೆ ಬರುತ್ತಲಿರುವ ಈ ಕತೆ ಅರ್ಥ ಮತ್ತು ಭಾಷೆ ಈ ಎರಡು ದೃಷ್ಟಿಯಿಂದಲೂ ಅತ್ಯಂತ ಅಭ್ಯಸನೀಯವಾಗಿದೆ. ೧೩–೧೪ ವರುಷಗಳ ಮೇಲಣ ತರಳರಷ್ಟೇ ಅಲ್ಲ, ತರುಣರೂ ಓದಿ ಲಾಭ ಹೊಂದದೆ ಇರಲಾರರು. ಇದರಲ್ಲಿ ಬಳಸಿದ ಭಾಷೆ ನೃಪತುಂಗ–ಪಂಪರ ಕಾಲದಿಂದ ಹೆಸರಾದ ಒಂಕುಂದ ಪುಲಿಗೆರೆಯ ತಿರುಳ್ ಕನ್ನಡ. ವಿಚಾರಗಳೊ ಅರಗಿಸಿಕೊಂಡಷ್ಟೂ ಪೌಷ್ಟಿಕವಾಮವು. ಕತೆ ಹಳೆಯದಾದರೂ ಅದರ ಒಪ್ಪ ಹೊಸತು.

ತಮ್ಮ ಬಾಲಕರು ಸುಸಂಸ್ಕೃತರಾಗಬೇಕೆಂಬ ಹಂಬಲವುಳ್ಳ ಶಿಕ್ಷಕರೂ ಪಾಲಕರೂ ಇಂಥ ಪುಸ್ತಕಗಳನ್ನು ಮಕ್ಕಳಿಗೆ ಓದಲು ಹಚ್ಚಬೇಕೆಂದು ಸೂಚಿಸುತ್ತೇವೆ.

**ಪ್ರಕಾಶಕ**






# ತಂತ್ರಗಾರ ಕರಟಕರಾಯ

## ನರಿಯಣ್ಣನು

ꕥꕥ

### ಕೈವಾಡ ೧

---

ಇಂದು ಅದೇನು ಸಂಭ್ರಮ, ಭರತ ಮೃಗೇಂದ್ರನ ಗವಿಯ ಮುಂದೆ! ಜಂಬೂದ್ವೀಪದ ಪಶುಪಕ್ಷ್ಯಾದಿಗಳ ಮಹಾರಾಜಾಧಿರಾಜನು ಅವನು. ಇಂದು ಆತನ ಪಟ್ಟಾಭಿಷೇಕದ ಸುವರ್ಣ ಮಹೋತ್ಸವವಂತೆ. ಅದಕ್ಕಾಗಿ ಹಿರಿಯ ಒಡ್ಡೋಲಗವು ಸೇರುವುದಿದೆ. ಗುಬ್ಬಿಯಿಂದ ಗೇಂಡಾಮೃಗದ ವರೆಗಿನ ಕಿರಿಯರು, ಹಿರಿಯರು, ಎಲ್ಲರೂ ಕಲೆತಿದ್ದಾರೆ. ಮಹಾಪ್ರಭುವು ಮಾತ್ರ ಇನ್ನೂ ಚಿತ್ತೈಸಿಲ್ಲ. ಮೃಗೇಂದ್ರನ ಬರವನ್ನೇ ಎಲ್ಲರೂ ಎದುರು ನೋಡುತ್ತಲಿದ್ದಾರೆ. ಶ್ರೀಮನ್ಮಹಾಸ್ವಾಮಿಗಳು ಬರಲು ಇನ್ನೂ ಸ್ವಲ್ಪ ಅವಕಾಶವಿದೆಯೆಂದು ಗೊತ್ತಾಗಿ, ಪಶು-ಪಕ್ಷಿಗಳಲ್ಲಿ ಅಲ್ಲಲ್ಲಿ ಕೆಲಕೆಲವು ಗುಂಪುಗಳಾಗಿ ಕುಚುಕುಚು, ಗುಜುಗುಜು ನಡೆಯಿತು. ಹೆಗ್ಗಡೆ ಹುಲಿರಾಯನಿಗೆ ಇದೆಲ್ಲ ಗಲಾಟೆಯನ್ನು ನೋಡಿ ಕಣ್ಣು ಸ್ವಲ್ಪ ಕಿಡಿಕಿಡಿಯಾಯಿತು. ಒಮ್ಮೆ ಅರ್ ಎಂದು ಆರ್ಭಟಿಸಿದ್ದೂ ಆಯಿತು. ಆದರೆ ಏನೂ ಪ್ರಯೋಜನವಾಗಲಿಲ್ಲ!

ಶ್ರೀ ಮಹಾಪ್ರಭುಗಳ ಪಾದಧೂಳಿಯನ್ನು ಪಡೆದು ಧನ್ಯರಾಗಬೇಕೆಂದು ಹಂಬಲಿಸುತ್ತಿದ್ದ ಸರದಾರ ತೋಳಪ್ಪ, ಖಡ್ಗಧಾರಿ ಗೇಂಡಾ

ರಾಯ ಮೊದಲಾದವರು ಮೃಗೇಂದ್ರನು ಇನ್ನೂ ಬರದಿದ್ದುದಕ್ಕೆ ಕಾತರಿಸಿ ಕಳವಳಗೊಂಡು ಕುಸುಕುಸು, ಗುಸುಗುಸು ನಡೆಸಿದ್ದರು. ಸಿರಿ ಅಡಿಗಳ ಆಗಮನಕ್ಕೆ ಏಕೆ ತಡವಾಗಿರಬಹುದು ? ಮೃಗೇಂದ್ರನ ಎಲ್ಲ ಪ್ರಜೆಗಳೂ ಬಂದಿರುವವು; ಎಲ್ಲ ಮಾಂಡಲಿಕರು, ಮನ್ನೆಯರು, ಸಾಮಂತರು, ಸರದಾರರೂ ಬಂದಿರುವರು. ಆದರೂ ಮಹಾಸಭೆಯು ಆರಂಭವಾಗುವುದಕ್ಕೆ ಬಂದ ತೊಂದರೆಯೇನು? ಎಂದು ಕಣ್ಣಿನಿಂದಲೇ ಒಬ್ಬರೊಬ್ಬರನ್ನು ಕೇಳುತ್ತಲಿದ್ದಾರೆ; ಬಾಯಿಬಿಟ್ಟು ಪ್ರಶ್ನೆಮಾಡುವ ಎದೆಗಾರಿಕೆ ಒಬ್ಬರಿಗೂ ಇಲ್ಲ!

ಆದರೆ ಮಹಾಸಭೆಯು ಆರಂಭವಾಗುವುದಕ್ಕೆ ಏಕೆ ತಡ ಎಂಬುದು ವೃದ್ಧ ಜಾಂಬುವಂತನಿಗೂ ಆತನ ಗುಂಪಿಗೂ ಸ್ವಲ್ಪ ಗೊತ್ತು. ಆದುದರಿಂದ ಅವರವರೊಳಗೆ ಕಿವಿಕಚ್ಚಾಟ ನಡೆದಿದೆ. ರಾಜತಂತ್ರ ಪ್ರವೀಣ ಮಹಾಸಂಧಿ–ವಿಗ್ರಹಿ ಕರಟಕರಾಯನು ಇಂದಿನ ಮಹಾಸಮಾರಂಭಕ್ಕೆ ಏಕೆ ಬಂದಿರಲಿಕ್ಕಿಲ್ಲ? ಎಂದು ಮುದ್ದ ಗರ್ದಭರಾಯನು ಮೆಲ್ಲನೆ ಕಿವಿಯಲ್ಲಿ ಕೇಳಿದನು. "ಇದು ನಿನ್ನ ತುತ್ತಲ್ಲ; ತಂತ್ರಜ್ಞ ಕರಟಕನ ಗೊಡವೆ ನಿನ್ನಂತಹ ಎಗ್ಗನಿಗೆ ಏಕೆ? ಸುಮ್ಮನಿರು; ಇಲ್ಲವಾದರೆ ಚಾಣಕ್ಯನನ್ನೂ ಮೀರಿಸಿದ ಆ ಕರಟಕನು ನಿನಗೂ ತನ್ನ ಕೈತೋರಿಸದೆ ಬಿಡಲಿಕ್ಕಿಲ್ಲ" ಎಂದು ಜಾಂಬುವಂತ ಕರಡಿಪ್ಪನು ಕರ್ ಗುರ್ ಎಂದು ಗೊಣಗಿದನು.

ಇಂದು ಮಹಾಸಭೆಗೆ ಬಂದವರಲ್ಲಿ ಕರಟಕರಾಯನ ಮಾಟಗಾರಿಕೆಗೆ ಬಲಿಬಿದ್ದು, ನೊಂದು, ಬೆಂದು, ಗಾಸಿವೀಸಿಯಾಗದವರೆ ವಿರಳ. ಮೃಗೇಂದ್ರನ ಪಟ್ಟಾಭಿಷೇಕದ ಹೊನ್ನ ಹಬ್ಬದಲ್ಲಿ ಭಾಗವಹಿಸಿ ಹಿಗ್ಗುಗೊಳ್ಳುವುದಕ್ಕಾಗಿ ಬಂದ ಪ್ರಾಣಿಗಳು ಬೆರಲ ಮೇಲೆ ಎಣಿಸುವಷ್ಟು ಮಾತ್ರ. ತಮಗೆ ಕರಟಕನಿಂದಾದ ಕಷ್ಟನಷ್ಟಗಳನ್ನು, ತೊಂದರೆ ತೊಳಲಾಟಗಳನ್ನು ಮಹಾರಾಜರವರಲ್ಲಿ ತೋಡಿಕೊಳ್ಳುವುದಕ್ಕಾಗಿ

ಇಲ್ಲವೆ ಅರಿಕೆ ಮಾಡಿಕೊಳ್ಳುವುದಕ್ಕಾಗಿ ಬಂದವರೆ, ಎಲ್ಲ. ರಾಜನೆಂದರೆ ಭೂಲೋಕದಲ್ಲಿ ದೇವರು ಇದ್ದಂತೆ. ದೇವರು ಹೇಗೆ ಸಾಮಾನ್ಯ ಜನರಿಗೆ ಕಾಣನೊ ಹಾಗೆಯೆ ಅರಸರು. ತಂತ್ರವಿದ್ಯಾವಿಶಾರದ ಕರಟಕರಾಯನೇ ಸಾಮಾನ್ಯವಾಗಿ ರಾಜಪ್ರತಿನಿಧಿಯಾಗಿ ಶ್ರೀಮನ್ಮಹಾಸ್ವಾಮಿಗಳ ಹೆಸರಿನಲ್ಲಿ ಅರಸುಗೈವವನು; ಆಡಳಿತವನ್ನು ಸಾಗಿಸತಕ್ಕವನು. ಸಂಧಿ ಅಥವಾ ವಿಗ್ರಹ ಮಾಡಿಸತಕ್ಕವನು. ಒಲಿದರೆ ಕೂಡಿಸಬಹುದು, ವಕ್ರನಾದರೆ ಕೊಲ್ಲಿಸಬಹುದು. ಮೊದಲನೆಯದಕ್ಕಿಂತ ಎರಡನೆಯದೇ ಆತನ ಕಾಯಕ. ಅವನ ಆಡಳಿತವೆಂದರೆ ಬೇಲಿ ಎದ್ದು ಹೊಲವನ್ನು ಮೆಯ್ದಂತೆ! ತೋಳವು ಕುರಿ ಕಾಯ್ದಂತೆ! ಸುದೈವದಿಂದ ಮೃಗೇಂದ್ರ ಮಹಾರಾಜನು ಸುವರ್ಣ ಮಹೋತ್ಸವಕ್ಕಾಗಿ ಕೊಟ್ಟ ಆಮಂತ್ರಣದ ಲಾಭವನ್ನು ಪಡೆದು, ಇದೇ ಸುಸಂಧಿಯನ್ನು ಸಾಧಿಸಿ, ತಮ್ಮ ದೂರುಗಳನ್ನೆಲ್ಲ ಹೇಳಿಕೊಳ್ಳಬೇಕೆಂದು ಕಾಮಿ–ಬೆಕ್ಕು ದಾರಿ ಕಾಯುತ್ತಿತ್ತು. ಚಮುಕಿ ಮೊಲ ತನ್ನ ಸರತಿ ಯಾವಾಗ ಬರುವುದು, ಎಂದು ಕಿವಿ ನಿಮಿರಿಸಿಕೊಂಡು ಕುಳಿತಿತ್ತು. ಎಚ್ಚಪ್ಪ ಏದು, 'ತನ್ನ ಮೈಮೇಲೆ ಇನಿತೊಂದು ಕೂರಂಬುಗಳಿದ್ದೂ ಕರಟಕನ ಕವಡು ತನ್ನನ್ನು ಮೋಸಗೊಳಿಸಿತಲ್ಲ,' ಎಂದು ಮಿಡುಕುತ್ತ ಸಿಂಹರಾಜನಲ್ಲಿ ಇದೆಲ್ಲವನ್ನು ಹೇಳಿ ಸೇಡು ತೀರಿಸಿಕೊಳ್ಳಲು ತವಕಪಡುತ್ತಿತ್ತು. ಮಹಾರಾಜರ ಹತ್ತಿರ ಕರಟಕನ ದೂರು ಹೇಳಬೇಕೆ ಬಿಡಬೇಕೆ? ಎಂದು ವೃದ್ಧ ಜಾಂಬುವಂತನು ಮೀನ–ಮೇಷ ನಡೆಯಿಸಿದ್ದನು. "ಹುಡುಗಬುದ್ಧಿಯ ಕಾಮಿ, ದುಡುಕುವ ಚಮುಕಿ, ತಟ್ಟನೆ ಸಿಡುಕುವ ಎಚ್ಚಪ್ಪ ಇವರಂತೆ ವಯೋವೃದ್ಧನೂ ಜ್ಞಾನವೃದ್ಧನೂ ಆದ ತಾನೂ ಶ್ರೀಮನ್ಮಹಾಪ್ರಭುಗಳ ಒಬ್ಬ ಅಮಾತ್ಯರ ವಿರುದ್ಧ ನಾಲಗೆಯನ್ನು ಹರಿಬಿಡಲಾದೀತೆ? ಇನ್ನು, ನನ್ನ ಕಣ್ಣೆದುರು ನಡೆವ ಕರಟಕನ ಅನ್ಯಾಯ

ಗಳನ್ನು ಕಣ್ಣಾರೆ ಕಂಡು ಸುಮ್ಮನೆ ಬಾಯಿ ಮುಚ್ಚಿಕೊಂಡಿರುವುದಾದರೂ ಸರಿಯೆ? ಎಂಬೀ ಬಗೆಯ ವಿಚಾರದ ಹೊಯ್ದಾಟದಲ್ಲಿ ಕರಡಿಪ್ಪನು ಹಾಸು ಹೊಯ್ಯುತ್ತಿದ್ದನು. ಜಾಂಬುವಂತನಿಂದ ಮುಂದೆ ಅವನ ಪೀಳಿಗೆಯಲ್ಲಿ ಇಳಿದ ಈ ಸ್ವಭಾವವು (ಹಾಸು ಹೊಯ್ಯುವುದು) ಈಗಲೂ ಕರಡಿಗಳಲ್ಲಿ ಹಾಗೆಯೇ ಉಳಿದುಕೊಂಡಿರುವುದನ್ನು ಕಾಣಬಹುದು.

ಒಡ್ಡೋಲಗಕ್ಕೆ ಬಂದ ಪ್ರಾಣಿಗಳು, ಇಂತು ತಮ್ಮ ತಮ್ಮೊಳಗೆ ಒಂದೊಂದು ಎಣಿಕೆಯನ್ನು ನಡೆಸಿರಲು ಅಷ್ಟರಲ್ಲಿ ಭೋಂಕನೆ ಪರಾಕಿನ ಎತ್ತರದ ದನಿಯು ಕೇಳಬಂದು, ಸಭಾಮಂಟಪದಲ್ಲಿ ಎಲ್ಲೆಡೆಗೆ ಶಾಂತಿಯು ತಾನೆತಾನಾಗಿ ವಿರಾಜಿಸತೊಡಗಿತು. « ಶ್ರೀಮದ್ರಾಜಾಧಿರಾಜ, ರಾಜಪರಮೇಶ್ವರ, ಗಜವೇಂಟೆಕಾರ, ನರಲೋಕದಲ್ಲಣ, ಪರನಾರೀ–ಸಹೋದರ ಇತ್ಯಾದಿ ಬಿರುದಾಂಕಿತ ಶ್ರೀ ಶ್ರೀ ಶ್ರೀ ಮೃಗೇಂದ್ರವರ್ಮ ಮಹಾಪ್ರಭೋ ಪರಾಕು" ಎಂದು ಕಾಳನೆಂಬ ಶೌನಕನು, ಬೊ, ಬೋ ವೌ ವೌ ಎಂದು ಮುಂತಾಗಿ ಬಗೆಬಗೆಯಿಂದ ಹೊಗಳಲಾರಂಭಿಸಿದನು. ಶ್ರೀಪಾದಂಗಳು ಸಿಂಹಾಸನವನ್ನು ಅಲಂಕರಿಸಿದ ಬಳಿಕ ಕೋಗಿಲೆಯ ಓಲಗ, ಕಾಕ–ಸಂಗೀತ, ಪಂಡಿತವಕ್ಕಿಯ ಕಿರ್ ಕಿರ್ ಕೀರ್ತನೆಗಳು ಆದುವು.

ಮೃಗೇಂದ್ರ ಮಹಾರಾಜನು ತನ್ನ ಆಯಾಲುಗಳನ್ನು ನೇವರಿಸಿಕೊಳ್ಳುತ್ತ ರಾಜಠೀವಿಯಲ್ಲಿ ಕುಳಿತು, ಗಾಂಭೀರ್ಯದಿಂದ ಹೆಗ್ಗಡೆಯನ್ನು ಕುರಿತು ವಾಡಿಕೆಯಂತೆ « ಏನು ಮಹಾಮಾತ್ಯರೇ, ನಮ್ಮ ಸಾಮ್ರಾಜ್ಯದಲ್ಲಿ ಎಲ್ಲವೂ ನೆಮ್ಮದಿ ತಾನೆ? " ಎಂದು ಕೇಳಿದನು.

ಹೆಗ್ಗಡೆಯು ಎದ್ದು ನಿಂತು, ಹೊರಹೊಮ್ಮುತ್ತಿರುವ ಹುಮ್ಮಸದಿಂದ "ಚಿತ್ತೈಸಬೇಕು ಮಹಾಪ್ರಭು" ಎಂದು ತನ್ನ ಮಾತಿಗೆ ಮೊದಲು ಮಾಡಿದನು. "ತಮ್ಮಡಿಗಳು ಪಟ್ಟವೇರಿ ಇಂದಿಗೆ ಐವತ್ತು

ವರುಷಗಳಾದುವು. ತಮ್ಮ ಏಕಛತ್ರಾಧಿಪತ್ಯದಲ್ಲಿ ಪ್ರಜೆಗಳೆಲ್ಲರಿಗೂ ತುಂಬ ವಿಶ್ವಾಸ, ಸಂತೋಷ. ತಮ್ಮಂತಹ ಪ್ರಭುಗಳು ದೊರೆತುದಕ್ಕಾಗಿ ತಾವು ಧನ್ಯರೆಂದೇ ಎಲ್ಲರು ಆಡಿಕೊಳ್ಳುತ್ತಲಿದ್ದಾರೆ. ತಮ್ಮಡಿಗಳಲ್ಲಿ ಇರುವ ಅಚಲವಾದ ನಿಷ್ಠೆಯನ್ನು ವ್ಯಕ್ತಗೊಳಿಸುವುದಕ್ಕಾಗಿಯೆ, ಸ್ವಾಮಿಭಕ್ತರಾದ ಸಕಲ ಪ್ರಜೆಗಳೂ ಸಾಮ್ರಾಜ್ಯದ ಮೂಲೆ ಮೂಲೆಗಳಿಂದ ಬಿಸಿಲೆನ್ನದೆ, ಚಳಿಯೆನ್ನದೆ, ದಾರಿಯ ದಣಿವಿಲ್ಲದೆ ತಂಡ ತಂಡವಾಗಿ ಬಂದು ಇಲ್ಲಿ ನೆರೆದಿದ್ದಾರೆ. ಇಲ್ಲಿ ಸೇರಿದ ಈ ನೆರವಿ ಯಾತರ ದ್ಯೋತಕ ಮಹಾಪ್ರಭು ? ಸಾಮ್ರಾಜ್ಯದಲ್ಲಿ ಎಲ್ಲವೂ ನೆಮ್ಮ...."

'ದಿ' ಎಂಬ ಕೊನೆಯಕ್ಕರವು ಹುಲಿರಾಯನ ಬಾಯಿಂದ ಹೊರಬರುವ ಹೊತ್ತಿಗೆ ಸರಿಯಾಗಿ ಓಲಗದ ಒಂದು ಮೂಲೆಯಿಂದ ಸಿಟ್ಟನೆ ಸೀತ ಸೀನಿನ ಸದ್ದು ಒಂದೇ ಬಾರಿ ಕೇಳಬಂತು. ಒಂದೇ ಸೀತು ಈ ಮಂಗಲ ಪ್ರಸಂಗದಲ್ಲಿ ಅಶುಭವನ್ನು ಸೂಚಿಸಿದವರಾರು, ಎಂದು ಸದ್ದು ಬಂದ ದಿಕ್ಕಿನ ಕಡೆಗೆ ಸಭೆಗೆ ಸಭೆಯೇ ಕಕ್ಕಾವಿಕ್ಕಿಯಾಗಿ ಕಣ್ಣು ಹೊರಳಿಸಿತು! ಅದು ಒಂದು ಟಗರು. ತಲೆ ಒಡೆದೀತೆಂಬ ಅರಿವು ಇಲ್ಲದೆ, ತಗರುವುದು (ಎಂದರೆ ಅಡ್ಡಗಟ್ಟುವುದು) ಟಗರಿನ ಒಂದು ಸ್ವಭಾವವೇ. ಆದರೆ ಅದು ಈ ಪ್ರಸಂಗದಲ್ಲಿ ಸೀನಿನ ರೂಪದಿಂದ ಹೊರಬಂದಿರಬೇಕು. ಸಿಂಹರಾಜನ ಪಿತ್ತ ನೆತ್ತಿಗೇರಿತು. ಹೆಗ್ಗಡೆಯ ಅಪ್ಪಣೆಯಂತೆ ತಲೆಒಡಕ ಸ್ವಭಾವದ ಟಗರನ್ನು ಬಂಧಿಸಿ ಮಹಾಸಭೆಯಿಂದ ಹೊರಗೆ ಎಳೆದೊಯ್ದರು.

ಹುಲಿರಾಯ ಹೆಗ್ಗಡೆಯು ಮತ್ತೆ ಸಭೆಯಲ್ಲಿ ಎದ್ದು ನಿಂತು ತನ್ನ ಉಪನ್ಯಾಸವನ್ನು ಮುಂದುವರಿಸಿದನು. "ತಗರಿನಂತಹ ಕೆಲವು ತರುಣರು, ನಮ್ಮ ಆಡಳಿತದಲ್ಲಿ ಅವಿಶ್ವಾಸವನ್ನು ಸೂಚಿಸುವ ಔದ್ಧತ್ಯವನ್ನು ತೋರಿದುದಕ್ಕಾಗಿ ಅವರಿಗೆ ತಕ್ಕ ದಂಡನೆಯು ವಿಧಿಸಲ್ಪಡಲೇಬೇಕು.

ಇಂದಿನ ಮಹಾಸಭೆಗೆ, ಸಂಧಿವಿಗ್ರಹ ಸಚಿವರೂ, ಧರ್ಮಾಧ್ಯಕ್ಷರೂ ಆದ ಕರಟಕ ಮಂತ್ರಿವರ್ಯರಿಗೆ ಜಡ್ಡಿನಿಂದ ಬರಲು ಸಾಧ್ಯವಾಗಲಿಲ್ಲ. ಅದಕ್ಕಾಗಿ ಅವರು ತಮ್ಮ ಅತ್ಯಂತ ವಿಷಾದಸೂಚಕ ಪತ್ರವನ್ನು ಬರೆದು ಕಳುಹಿ ಶ್ರೀಮನ್ಮಹಾಪ್ರಭುಗಳ ಹಾಗೂ ಮಹಾಸಭೆಯ ಕ್ಷಮಾಪಣೆಯನ್ನು ಕೋರಿದ್ದಾರೆ. ಕರಟಕ ಮಂತ್ರಿಗಳಿದ್ದರೆ ತಗರಿಗೆ ಯಾವ ಶಿಕ್ಷೆ ವಿಧಿಸತಕ್ಕುದೆಂಬುದನ್ನು ಈಗಲೆ ನಿರ್ಧರಿಸಿಬಿಡಬಹುದಾಗಿತ್ತು; ಆದರೆ ಅವರು ಇಲ್ಲಿ ಈಗ ಇಲ್ಲದುದರಿಂದ ಈ ಕೆಲಸವನ್ನು ಮುಂದೆ ಹಾಕಲಾಗಿದೆ." ಎಂದು ಹುಲಿರಾಯನು ಹೇಳುತ್ತಿವಾಗಲೇ ಸರದಾರ ತೋಳನು ಇನ್ನು ಸುಮ್ಮನಿರುವುದು ತರವಲ್ಲವೆಂದು ಮಹಾಸನ್ನಿಧಾನದಲ್ಲಿ ಹೋಗಿ ಮೆಲ್ಲನೆ ಏನೊ ಉಸುರಿದನು.

ಒಡನೆಯೇ ತಲೆಕೊಡಹಿ ಮೃಗೇಂದ್ರ ಮಹಾರಾಜನು ಅಪ್ಪಣೆ ಕೊಡಿಸಿದ್ದೇನೆಂದರೆ: "ಮಂತ್ರಿವರೇಣ್ಯರೆ, ಸ್ವಲ್ಪ ತಾಳಿರಿ; ನಾನು ಎಣಿಸಿದುದಕ್ಕಿಂತಲೂ ವಿಪರೀತವಾಗಿ ನಮ್ಮ ಅಧಿಕಾರಿಗಳ, ವಿಶೇಷವಾಗಿ ಸಂಧಿವಿಗ್ರಹಿ ಕರಟಕನ ವಿಚಾರದಲ್ಲಿ ಪ್ರಜೆಗಳೆಲ್ಲ ತುಂಬ ಬೇಸತ್ತಿರುವಂತೆ ತೋರುತ್ತದೆ. ಆತನಿಗೆ ಧರ್ಮಸಂರಕ್ಷಕ ಮಂಡಲದ ಅಧ್ಯಕ್ಷನನ್ನು ಮಾಡಿದುದು ಸರಿಯಾಯ್ತೆ, ಎಂಬ ಸಂದೇಹವುಂಟಾಗಿದೆ ನನಗೆ. ಪೆರ್ಗಡೆಯವರೆ, ನಾನು ಈ ಕರಟಕನ ನಡೆವಳಿಯ ಸಲುವಾಗಿ ವಿಚಾರಣೆಯನ್ನು ನಡೆಸದೆ ಇದ್ದರೆ ಪ್ರಜೆಗಳಲ್ಲಿ ಅಸಂತೋಷವು ಹೆಚ್ಚಿ, ರಾಜ್ಯದಲ್ಲಿ ಅರಾಜಕತೆಯು ತಲೆದೋರೀತೆಂಬ ಹೆದರಿಕೆಯುಂಟಾಗುತ್ತಿದೆ. ಅಲ್ಲದೆ ಯಾರಿಗೇ ಆಗಲಿ, ಅನ್ಯಾಯಕ್ಕೆ ತಕ್ಕ ಶಿಕ್ಷೆಯು ಆಗಲೇಬೇಕು. ಆದುದರಿಂದ ಕರಟಕನು ನನ್ನ ಅಧಿಕಾರಿ ವರ್ಗದವನಾಗಿದ್ದರೂ ಆತನ ನ್ಯಾಯಾನ್ಯಾಯಗಳ ವಿಚಾರಣೆಯಾಗುವುದು ಇಷ್ಟವಾಗಿದೆ.

“ಆದಕಾರಣ ಸನ್ಮಾನ್ಯ ಸಭಿಕರೆ, ನೀವು ಇಂದು ನನಗೆ ನ್ಯಾಯ ದಾನದ ಕೆಲಸದಲ್ಲಿ ನೆರವಾಗಬೇಕೆಂದು ಬೇಡಿಕೊಳ್ಳುತ್ತೇನೆ. ಕರಟಕ ನಿಂದ ಅನ್ಯಾಯಗಳನ್ನು ಅನುಭವಿಸಬೇಕಾದವರು ಮುಂದೆ ಬಂದು, ತಮಗಾದ ಹಾನಿ–ಹರಿಬಗಳನ್ನು ವಿವರಿಸಬೇಕು.”

ಕರಟಕನ ಕೋಟಲೆಗೆ ವಿಲಿವಿಲಿಯಾದ ಸರದಾರ ತೋಳಪ್ಪನೇ ಧೈರ್ಯದಿಂದ ಮೊದಲು ಎದ್ದು ತನ್ನ ಗೋಳನ್ನು ಹೇಳಲಾರಂಭಿಸಿದನು. “ಮಹಾಪ್ರಭು, ಕರಟಕರಾಯನು ಸಂಧಿವಿಗ್ರಹ ಸಚಿವನು. ಅವನು ಜನರನ್ನು ಒಲಿಸುವುದರಲ್ಲಿ ಮಿಗಿಲಾಗಿರುವಂತೆ, ಒಡಿಸುವುದರಲ್ಲೂ ಅವನ ಕೈ ಹಿಡಿದವರು ಯಾರೂ ಇಲ್ಲ. ನಮ್ಮ ತೋಳಗಳ ಪಂಗಡ ದಲ್ಲಿದ್ದ ಮೊದಲಿನ ಒಕ್ಕಟ್ಟು ಇಂದು ಉಳಿದಿಲ್ಲ. ಇದಕ್ಕೆ ವಿಗ್ರಹಿ ಕರಟಕನೇ ಕಾರಣನು. ನಮ್ಮ ಸಮಾಜದಲ್ಲಿ ಒಡಕು ಹುಟ್ಟಿಸಿ–ಅಷ್ಟ ರಿಂದಲೇ ತೃಪ್ತಿಯಿಲ್ಲ ಇವನಿಗೆ– ನಮ್ಮ ಕೌಟುಂಬಿಕ ಸುಖಕ್ಕೂ ಕೇರು ಹಾಕುವ ಹವಣಿಕೆಯಲ್ಲಿದ್ದಾನೆ. ಮೊನ್ನೆ ತಾನೆ ಒದಗಿದ ಒಂದು ಮಾತು ಅರಿಕೆ ಮಾಡಿಕೊಳ್ಳುತ್ತೇನೆ, ಪ್ರಭು; ಅಂದು ನಾನು ಮನೆಯಲ್ಲಿ ಇರಲಿಲ್ಲ, ನನ್ನ ಹೆಂಡತಿ ಒಬ್ಬಳೇ ಇದ್ದಳು. ಅವಳಿಗೆ ನನ್ನ ವಿಷಯ ದಲ್ಲಿ ಅಲ್ಲದ ಸಲ್ಲದ ಸಂಗತಿಗಳನ್ನು ಹೇಳಿ ನನ್ನಲ್ಲಿ ಅವಳಿಗೆ ಅಪನಂಬಿಕೆ ತಲೆದೋರುವಂತೆ ಮಾಡಲು ಹವಣಿಸಿದನು. ಆದರೆ ನನ್ನ ಸತೀ ಶಿರೋ ಮಣಿಯ ಮುಂದೆ ಅವನ ಆಟ ನಡೆಯಲಿಲ್ಲ. ಹೆಣ್ಣುಮಕ್ಕಳು ಹುಟ್ಟು ಬುದ್ಧಿಯವರು, ಸ್ವಾಮಿ. ಅವಳಿಗೆ ಈತನ ನಡೆನುಡಿಗಳು ಸಂದೇ ಹಾಸ್ಪದವೆನಿಸಿ, ನನ್ನ ಚಿಕ್ಕ ಮಕ್ಕಳಿಂದ, ‘ಅವರು ಮನೆಯಲ್ಲಿ ಇಲ್ಲ; ಈಗ ದಯಮಾಡಿ, ಬಂದ ಮೇಲೆ ಬನ್ನಿ,’ ಎಂದು ಸೌಜನ್ಯದಿಂದ ಹೇಳಿ ಕಳುಹಿದಳು. ಕರಟಕರಾಯನು ತನ್ನ ಹತ್ತಿರ ಹೇಳಬಂದ ನನ್ನ ಮುದ್ದುಮಕ್ಕಳಿಗೆ ಏನು ಮಾಡಿದನು ಗೊತ್ತೆ? ಕಣ್ಣಲ್ಲಿ ದೂಳು ಎರಚಿ

ದನು. ‘ಅಯ್ಯೋ,’ ‘ಕುಯ್ಯೊ’ ಎಂದು ಹುಯಿಲಿಡುತ್ತ ಗೋಳಾಡುವ ಮಕ್ಕಳನ್ನು ಕಂಡು ಕಾತರಿಸಿ ಕಳವಳಪಟ್ಟು ಎತ್ತಿಕೊಂಡು ಸಂತಯಿಸ ಬಂದ ನನ್ನವಳಿಗೆ ನೂಕಿ ಓಡಿಹೋದನು! ಆಗಲೂ ಓಡಿ ಹೋಗುವವನಲ್ಲ; ಆದರೆ ಮಕ್ಕಳ ಒರಲು ಕೇಳಿ ನನ್ನ ಓಲೆಕಾರರು ಅಲ್ಲಿಗೆ ಧಾವಿಸಿ ಬರುತ್ತಿರುವುದನ್ನು ಕಂಡು ಅಲ್ಲಿಂದ ಕಾಲು ಕಿತ್ತಿದನು! ನನ್ನಂತಹವರದೇ ಈ ಪಾಡು ಆದ ಬಳಿಕ ಉಳಿದವರು ಯಾವ ಗಿಡದ ಸೊಪ್ಪು, ಮಹಾಸ್ವಾಮಿ?”

ತೋಳನ ಈ ಹೇಳಿಕೆ ಮುಗಿವಷ್ಟರಲ್ಲಿ ಚಮಕಿ ಮೊಲನು ಚಟ್ಟನೆ ಎದ್ದು ಕಿವಿನಿಮಿರಿಸಿ ಎಂದನು; “ತೋಳನು ಸರದಾರ; ಪರಾಕ್ರಮಿ. ಪರರ ಆಕ್ರಮಣದಲ್ಲಿಯೇ ತನ್ನ ಪೌರುಷವುಂಟೆಂದು ಹೆಮ್ಮೆಪಡುವವರ ವರ್ಗಕ್ಕೆ ಸೇರಿದವನು ಆತನು. ಇವರಿಗೆ ನಮ್ಮ ಮೊಲ, ಕುರಿ ಮೊದಲಾದ ಜಗತ್ತೆಲ್ಲ ‘ಕೂಳು’ ಎಂದು ಬಿರುದು ಕೊಟ್ಟಿದೆ. ಜಗತ್ತೆಲ್ಲವೂ ತಮ್ಮ ಕೂಳು (ಅನ್ನ); ಅದನ್ನು ತಿನ್ನುವುದು ತಮ್ಮ ಜನ್ಮಸಿದ್ಧ ಹಕ್ಕು, ಎಂದು ಈ ವರ್ಗದವರ ತತ್ವಜ್ಞಾನವಂತೆ; ಮಹಾರಾಜ! ಇಂತಹ ಕೂಳರು ಹೆಚ್ಚಿದ ಕಾವಿನಲ್ಲಿ ಬಾಳುವರು ಆಳಾಗಬಹುದೆ, ಬುದ್ಧೀ? ಆಯ್ತು. ಈ ಕೂಳನಿಗೂ ಆ ತಂತ್ರಿಗೂ ಗಂಟು; ಅಥವಾ ಸೇರಿಗೆ ಸವ್ವಾಸೇರು, ಎನ್ನಿ. ಆದರೆ ಯಾರನ್ನೂ ಕೊಲ್ಲದೆ, ಕದಿಯದೆ ಕೇವಲ ಸನಾತನ ನೀತಿಧರ್ಮವನ್ನೇ ಅನುಸರಿಸಿ ನಡೆವ ನಮ್ಮಂತಹ ಬಡಪಾಯಿಗಳು ಕರಟಕ ಮಹಾರಾಯನ ಕೈವಾಡದಿಂದ ಪಾರಾಗಿ ಬದುಕುವುದು ಎಂತು, ಎಂಬುದೇ ತಿಳಿಯದಾಗಿದೆ. ತೋಳರಂತಹರನ್ನು ನಿಗ್ರಹಿಸುವುದಕ್ಕೆ ತಂತ್ರಜ್ಞನಾದ ಕರಟಕನೆ ಸಮರ್ಥನು. ಆತನು ಸಂಧಿ-ವಿಗ್ರಹಿಯಾದುದಕ್ಕೆ ನಮಗೆಲ್ಲ ಹಿರಿಹಿರಿ ಹಿಗ್ಗು. ಆದರೆ ಇಂದು ಕಾಪಿನವರೇ ಕೊಲೆ ಮಾಡಬಂದಂತಾಗಿದೆ.

" ಕರಟಕರಾಯನು ಮೊನ್ನೆ ನಮ್ಮಲ್ಲಿ ಬಂದ. ಆಗ ನನಗೆ ಗುರುತು ಸಿಕ್ಕಲಿಲ್ಲ. ಈತನೂ ತೋಳರ ಜಾತಿಯವನೇ. ತೋಳರ ಮೈ ಕಂದು–ಕಪ್ಪು ಮಾಡಿ, ದೇವರು, ಇವರು ಒಳಗೂ ಹೊರಗೂ ಒಂದೇ ಎಂದು ಸೂಚಿಸಿದ್ದಾನೆ. ನರಿಯಣ್ಣನು ತನ್ನ ಅಂತರಂಗದ ಗುಟ್ಟು ತನ್ನ ಮೈಮೇಲೆ ಎದ್ದು ಕಾಣಬಾರದೆಂದು ಬಣ್ಣ ಬದಲಿಸಿದುದು ನನಗೆ ಮೊದಲು ತಿಳಿಯಲೇ ಇಲ್ಲ. ಕರಟಕರಾಯನು ಶಾಟಿಯನ್ನು ಹೊದ್ದು ಕೊಂಡು ಪ್ರಸನ್ನ ಮುದ್ರೆಯಿಂದ ನಮ್ಮ ಬಿಡಾರಕ್ಕೆ ದಯಮಾಡಿಸಿದ್ದನು. ಕೈಯಲ್ಲಿ ಜಪಮಾಲೆ; ಬಾಯಲ್ಲಿ ಮಂತ್ರ! ' ಇದೇನು ವೇಷ ? ' ಎಂದೆ ಮನದಲ್ಲಿ. ನರಿಯಣ್ಣನು, ಇದನ್ನು ಮುಂಗಂಡು, ನನ್ನ ಸಂದೇಹ ವನ್ನು ಹೋಗಲಾಡಿಸುವುದಕ್ಕಾಗಿ ತಾನೇ ಮಾತಿಗೆ ಮೊದಲು ಮಾಡಿದನು.

" ಮೊಲರಾಯ, ನನ್ನದು ಇದು ವೇಷವಲ್ಲ. ನನ್ನ ಕಾವಿಯ ಮೈಬಣ್ಣ ನಾನು ತಪಸ್ಸಿನಿಂದ ಪಡೆದ ವರದಿಂದ ದೊರೆತ ಫಲ. ನಮ್ಮ ಬಳಗದ ತೋಳರಂತೆಯೇ ನನ್ನ ಮೈಯೂ ಮೊದಲು ಕಂದು ಅಥವಾ ಕಪ್ಪು ಬಣ್ಣದ್ದಿದ್ದುದು ನಿಜ. ಆದರೆ ' ನ ತಾದೃಶಾ ಆಕೃತಿ ವಿಶೇಷಾಃ ಗುಣವಿರೋಧಿನೋ ಭವಂತಿ' ಎಂದು ಹೇಳಿಲ್ಲವೆ? ಮೈಯಂತೆ ಮನಸ್ಸು; ಅಥವಾ ಮನಸಿನಂತಹ ಮೈಯಿರುತ್ತದೆಂದು ಹೇಳಿದರೆ ತಪ್ಪಾಗದು. ತೋಳರ ಕೊಳತನದ ನಡೆನುಡಿಗಳ ಹಿಕರಿಕೆಯುಂಟಾಗಿ, ನಾನು ಅವರಿಂದ ಬೇರೆಯಾಗ ಬಯಸಿದೆನು. ನನ್ನ ಮೊದಲಿನ ಕೀಳು ಬಾಳಿನ ಬಗೆಗೆ ತುಂಬ ಪಶ್ಚಾತ್ತಾಪಬಟ್ಟು, ಪ್ರಾಯಶ್ಚಿತ್ತಗಳನ್ನು ಹೊಂದಿದೆನು. ಇಂತು ವೈಮನಗಳಿಂದ ನೊಂದು ಬೆಂದು, ಇಂದು ನೋಂಪಿಯಾಗಿದ್ದೇನೆ. ಹಲವಾರು ಅಣುವ್ರತ, ಮಹಾವ್ರತಗಳನ್ನು ಆಚರಿಸಿದ್ದೇನೆ. ಈ ಬಗೆಯಾದ ಉಗ್ರತಪಸ್ಸಿನಿಂದ ಅಂತಃಶುದ್ಧಿಯನ್ನು

ಪಡೆದುದರ ಪ್ರತ್ಯಕ್ಷಫಲವೇ ನನ್ನ ಈ ಚಿನ್ನ ಕೆಂದು ಮೈಬಣ್ಣ. ಈಗ ನಾನೂ ಒಬ್ಬ ಶಿವಶರಣ. ಆದುದರಿಂದ ನಾನು ಈಗ ಕರಟಕನಲ್ಲ, ನರಿಯೂ ಅಲ್ಲ. 'ನರಿ' ಎಂದರೆ ಜಿರಕೆ, ಗತ್ತುಗಾರನೆಂಬ ಅಪಾರ್ಥದ ಹೆಸರು ನನಗೆ ಒಪ್ಪದು. ನನಗೂ ನನ್ನ ಪಂಗಡದವರಿಗೂ ಶಿವ ಅಥವಾ ಶಿವಾ ಎಂಬ ಹೊಸ ಹೆಸರನ್ನು ಲೋಕದಲ್ಲಿ ಶ್ರೇಷ್ಠರೆನಿಸಿದ ಸು–ಸಂಸ್ಕೃತರು ಇಟ್ಟಿರುವರು. ಶಿವನು ನಮ್ಮ ಉಪಾಸ್ಯ ದೈವತವು. ದೇವರ ಹೆಸರಿಗೆ ಸಂಬಂಧಿಸಿಯೆ ಆತನ ಭಕ್ತರಿಗೂ ಕರೆವುದೊಂದು ವಾಡಿಕೆ.

"ಚಮುಕಿರಾಯ, ಇನ್ನಾದರೂ ನಿನಗೆ ನನ್ನ ಶುದ್ಧಾಂತಃಕರಣದ ಮನವರಿಕೆಯಾಯ್ತೆ? ಮೊಲರಾಯ, ನೀನು ಬಾಲಭಾವದ, ಎಳೆಮನಸಿನ ಮುದ್ದು ತರಳ. ಸ್ವಲ್ಪ ತರಲ ಸ್ವಭಾವದವನಾದರೂ ನೀನು ಮೋಸ, ಹಿಂಸೆಗಳನ್ನು ಅರಿಯದ ಪವಿತ್ರವಸ್ತು; ಎಂದೇ, ಯಾವ ಬಾಹ್ಯಾಡಂಬರಗಳಿಲ್ಲದೆ, ಸದ್ದುಮಾಡದೆ ಲೋಕಕ್ಕೆಲ್ಲ ಶಾಂತಿ ಸೌಖ್ಯಗಳನ್ನು ಕೊಡುವ ಚಂದಿರನು ನಿನ್ನನ್ನು ತನ್ನ ವಾಹನವಾಗಿ ಮಾಡಿಕೊಂಡಿರುವನು. ಕಿವಿಗಳು ಉದ್ದವಿರುವುದು ಕಡಿಮೆ ಬುದ್ಧಿಯ ಕುರುಹೆಂದು ಕೆಲವು ಪಂಡಿತರು ಹೇಳುವರು. ಆದರೆ ಪಾಂಡಿತ್ಯ, ಧೂರ್ತಬುದ್ಧಿವಂತಿಕೆಗಳೆಲ್ಲವೂ ಸಾಧುಜೀವನಕ್ಕೆ ವಿಘ್ನಕಾರಿಗಳೆಂದು ಭಕ್ತಿಮಾರ್ಗದಲ್ಲಿ ಹೇಳಿದುದು ಆ ಪಂಡಿತರಿಗೇನು ಗೊತ್ತು? ಆತ್ಮಜ್ಞಾನವಾಗುವುದಕ್ಕೆ ಪಾಂಡಿತ್ಯ ಬೇಡ; ಶುದ್ಧ ಸಾತ್ವಿಕ ಭಾವ ಬೇಕು. ಅದು ನಿನ್ನಲ್ಲಿ ಸಂಪೂರ್ಣವಾಗಿದೆ. ಅಥವಾ ಸ್ಫಟಿಕದಂತೆ ನಿಷ್ಕಲ್ಮಷವಾಗಿರುವ ಆ ಶುದ್ಧಸಾತ್ವಿಕ ಭಾವವೇ ಮೈಗೊಂಡು ಮೊಲದ ರೂಪದಲ್ಲಿ ಈ ಲೋಕದಲ್ಲಿ ಬಂದಿದೆ. ನಿನ್ನ ಈ ಬೆಣ್ಣೆಯಂತಹ ಬೆಳ್ಮೈಯೇ ಇದಕ್ಕೆ ಸಾಕ್ಷಿ. ಮೊಲರಾಯ, ನೀನು ಸಾಧನ ಮಾಡಿದರೆ ದೇವರ ಸಾಕ್ಷಾತ್ಕಾರವಾಗುವುದಕ್ಕೆ ನನ್ನಂತೆ ಬಹಳ ಕಷ್ಟಪಡಬೇಕಾಗಿಲ್ಲ. ನನ್ನ ಪಾಪಗಳು

ತೊಳೆದುಹೋಗುವುದಕ್ಕೆ ನೂರಾರು ವರುಷ ಘೋರತಪಸ್ಸನ್ನು ಮಾಡ ಬೇಕಾಯ್ತು. ಆದರೂ ಇನ್ನೂ ನನ್ನ ಮೈಮೇಲಿನ ಪೂರ್ವ ಪಾಪಸೂಚಕ ಆ ಕಪ್ಪುಗೆರೆಗಳು, ಅಲ್ಲೊಂದು ಇಲ್ಲೊಂದು ಉಳಿದುಕೊಂಡಿವೆ. ಅದೆ ನಿನ್ನ ಮೈ ನೋಡು, ಮುಟ್ಟಿದರೆ ಮಾಸೀತು! ಏನು ನುಣುಪು! ಏನು ಸೊಗಸು! ನಿನ್ನನ್ನು ಕಾಣುವುದೇ ಒಂದು ಸುಖ; ನಿನ್ನ ಸಹ ವಾಸದಲ್ಲಿರುವುದೇ ಒಂದು ಭಾಗ್ಯ.

"ಮೊಲರಾಯ, ನನಗೆ ಪರಶಿವನ ದರ್ಶನವನ್ನು ಮಾಡಿಸಿದ ಒಂದು ಮಹಾಮಂತ್ರವನ್ನು ನಿನಗೂ ಹೇಳಬೇಕೆಂಬ ಚಪಲವುಂಟಾ ಗಿದೆ. ಅದರ ಅನುಷ್ಠಾನದಿಂದ ನಿನಗೆ ಸದ್ಗತಿ ದೊರೆಯುವುದು ನಿಶ್ಚಿತ. ಈ ಜನ್ಮದಲ್ಲಿ ಯಾವನೊಬ್ಬ ಗುರುವಿನಿಂದ ಅಧ್ಯಾತ್ಮದ ಉಪದೇಶವನ್ನು ಪಡೆಯದಿದ್ದರೆ ಆ ಬಾಳು ಹಾಳು. ಈ ದೇಹವು ಅಶಾಶ್ವತ. ದೇಹ ವೆಂಬ ಈ ನೌಕೆಯು ಒಡೆದ ಮೊದಲೇ ಪರಗತಿಯ ಆ ದಂಡೆಯನ್ನು ಮುಟ್ಟು. ಆ ದಂಡೆಯನ್ನು ಮುಟ್ಟುವುದಕ್ಕೆ ಸಾಧು-ಸಜ್ಜನರ ಉಪ ದೇಶವೇ ಊರುಗೋಲು. ಆದುದರಿಂದ ನೀನು ಆ ಮಂತ್ರೋಪದೇಶ ವನ್ನು ಬೇಗನೆ ಪಡೆದಷ್ಟು ಒಳಿತಲ್ಲವೆ? ವಿಚಾರಿಸು" ಎಂದು ಕರಟಕನು ಮಾತನಾಡಿ ಕೊನೆಗೆ 'ಗುರುವಿನ ಗುಲಾಮನಾಗುವತನಕ ದೊರೆಯ ದಣ್ಣ ಮುಕುತಿ' ಎಂಬ ಹಾಡನ್ನು ಭಾವವು ಹೊರಹೊಮ್ಮುವಂತೆ ತಲ್ಲೀನತೆಯಿಂದ ಹೇಳಿದನು. ನಾನು ಆ ಸಂಗೀತಕ್ಕೆ ಮೋಹಿಸಿ, ಮೊದಲು ದೂರದಲ್ಲಿ ಕುಳಿತಿದ್ದ ನರಿಯಣ್ಣನನ್ನು ನನ್ನ ನೆರೆಗೆ ಬರ ಗೊಟ್ಟೆನು. "ಮಹಾಮಂತ್ರೋಪದೇಶವು ಹೆರವರ ಕಿವಿಗೆ ಬಿದ್ದರೆ ಅನರ್ಥವಾಗುವುದು. ಆದುದರಿಂದ ಅದನ್ನು ಕಿವಿಯಲ್ಲಿಯೇ ಹೇಳುವ ಪದ್ಧತಿಯಿದೆ" ಎಂದು ನೆಪಹೇಳಿ ಹೊರಗೆ ಬಂದವನು ಗಬಕ್ಕನೆ ನನ್ನ ಕತ್ತಿಗೆ ಬಾಯಿ ಹಾಕಿದ್ದನು. ಆದರೆ ನನ್ನ ಸುದೈವ. ಅಷ್ಟರಲ್ಲಿ ದೂರ

ದಿಂದ ಬೇಟೆಯ ನಾಯ್ಗಳ ಬೊಗಳು ಕೇಳಬಂದಿತು. ಒಡನೆಯೇ ನರಿಯಣ್ಣನು ತನ್ನ ಜೀವಕ್ಕೆ ಹೆದರಿ ಕಣ್ಮರೆಯಾದನು.”

‘ ನಿಜ; ದೇವರೆ, ’ ಹೆಬ್ಬುಲಿ, ಬಿಡುಬಾಯ, ಜೊಲ್ಲು ಕೆನ್ನಾಲಗೆಯ ನಾಯಿಯೊಂದು ಅರಚಿತು. ‘ ನಿಜ; ಆ ಕರಟಕನೆಂದರೆ ನನ್ನ ಒಡಲು ಉರಿಯುತ್ತಿದೆ. ಬೆನ್ನ ಮೇಲೆ ಹೊಡೆಯಬಹುದು; ಹೊಟ್ಟೆಯ ಮೇಲೆ ಬಡೆಯಬೇಕೆ, ಒಡೆಯರೆ? ಆ ನರಿಯಣ್ಣನು ನನ್ನ ಮನೆ ಹೊಕ್ಕು ರೊಟ್ಟಿಗಳನ್ನೆಲ್ಲ ಕದ್ದಿರುವನು. ಯಾರನ್ನಾದರೂ ಓಲೈಸಿ ಹೊಟ್ಟೆಗೆ ಹಿಟ್ಟು ದೊರಕಿಸುವ ಬಡವನು ನಾನು. ಕೆಲಸ ಮಾಡಿ ದುಡಿದು, ದಣಿದು ಮನೆಗೆ ಬರುವಷ್ಟರಲ್ಲಿ ಇದ್ದ ಎರಡು ತುಣುಕು ಕದ್ದು ಹೋದರೆ, ನಾನೇನು ಹೊಟ್ಟೆಗೆ ಕೇರು ಹಾಕಿಕೊಳ್ಳಬೇಕೆ ಧಣಿಗಳೆ? ”

“ ಸರಿ; ಸರಿ, ಒಳ್ಳೆ ಸಜ್ಜನ ನೀನು” ಎಂದು ಕೊರ್ರನೆ ಗುರುಗುಟ್ಟುತ್ತ ಕಾಡ ಕಾಮಿಯು ಮೈಯುಬ್ಬಿಸಿ ಮುಂದೆ ಬಂದಿತು. “ ಈತನು ತಾನು ಒಬ್ಬರ ಅನುಯಾಯಿ ಎಂದು ಹೇಳುವುದೇ ಶುದ್ಧ ಸುಳ್ಳು; ಬಂಟರಿಗೆ, ಬೇಟೆಗಾರರಿಗೆ ಇವನು ಅನುನಾಯಿಯಾಗಿರಬಹುದು. ಆದರೆ ನಮ್ಮಂತಹರ ಪಾಲಿಗೆ ಇವನು ನಾಯಕ ! ಬಲ್ಲಾಳ್ಗಳೆದುರು ಬಾಲವನ್ನು ಅಲ್ಲಾಡಿಸುವುದರಲ್ಲಿ ಈತನು ಬಲ್ಲಿದನಾಗಿರುವಂತೆ, ಬಲಹೀನರನ್ನು ಮುರಿದು ತಿನ್ನುವುದರಲ್ಲಿಯೂ ಮಿಗಿಲಾಗಿರುವನು. ಆದುದರಿಂದಲೇ ಇವರಿಗೂ ನಮಗೂ ಹುಟ್ಟುಹಗೆ.

“ ತಮ್ಮ ಶ್ರೀಪಾದಂಗಳ ಸಾಕ್ಷಿಯಾಗಿ ಹೇಳುತ್ತೇನೆ, ಜೀಯಾ, ಈ ನಮ್ಮ ನಾಯಕರು, ತಮ್ಮವೆಂದು ಹೇಳುವ ರೊಟ್ಟಿಗಳು ನನ್ನವು. ನಾನು ತಿಮ್ಮಪ್ಪ ರೈತನಲ್ಲಿಂದ ಅವರು ಎಲ್ಲರೂ ಹೊಲಕ್ಕೆ ಹೋದಾಗ ಸಂಪಾದಿಸಿದುವು. ತಿಮ್ಮಪ್ಪನ ಮನೆಯವರು ಸುಗ್ಗಿಯ ಕೆಲಸದ ಗಡಿ

ಬಿಡಿಯಲ್ಲಿ ಮಾಡಿದ ರೊಟ್ಟಿಗಳನ್ನು ಸರಿಯಾಗಿ ಮುಚ್ಚಿಡುವುದನ್ನೇ ಮರೆತು ಬೇರೆ ಕೆಲಸದಲ್ಲಿ ತೊಡಗಿದ್ದರು. ಹೀಗೆ ಮಾಡುವುದು ಹಾನಿಕರ; ಮೈತುಂಬ ಕಣ್ಣಿನವರಾಗಿ ಅರಿವು ಮರವುಗಳನ್ನು ದೂರೀರಿಸಿ, ಒಳ್ಳೇ ಎಚ್ಚರದಿಂದ ಎಲ್ಲ ಕೆಲಸಗಳನ್ನೂ ಮಾಡುವ ಅವಶ್ಯಕತೆಯನ್ನು ಅವರಿಗೆ ಕಲಿಸುವುದಕ್ಕಾಗಿ ನಾನು ತಿಮ್ಮಪ್ಪಣ್ಣನ ಮನೆಯ ರೊಟ್ಟಿಗಳನ್ನು ಎತ್ತಿದೆನು. ಆದರೆ ಈ ತುಂಟ ನಾಯಕರು ದಾರಿಯಲ್ಲಿಯೇ ನನ್ನನ್ನು ಅಡ್ಡಗಟ್ಟಿ, ತುಡುಕಿ ರೊಟ್ಟಿಗಳನ್ನು ದೋಚಿಕೊಂಡು ಹೋದರು! ಹೀಗಾದರೆ ತಮ್ಮ ಈ ಪ್ರಜೆಗಳು ಬಾಳುವ ಬಗೆಯೆಂತು!" ಎಂದು ಕೊನೆಗೆ ದೈನ್ಯದಿಂದ ಉಸುರಿತು, ಕಾಮಿ.

ಇದೆಲ್ಲವನ್ನು ಕಿವಿಗೊಟ್ಟು ಆಲಿಸುತ್ತ ಬಳಿಯ ಮರದ ಕೊಂಬೆಯಲ್ಲಿ ಕುಳಿತಿದ್ದ ಒಂದು ಗಿಡುಗವು ಫಕ್ಕನೆ ನಡುವೆ ಬಾಯಿಹಾಕಿತು. 'ಅಹಾ! ಇದೆಲ್ಲವೂ ಒಳ್ಳೆಯ ನ್ಯಾಯ!' ಅದು ಎಂದಿತು. "ಕರಟಕ ನಿಲ್ಲದಾಗ ಎಲ್ಲರೂ ಅವನನ್ನು ದೂರುವವರೇ. ಕರ್ತೃತ್ವಶಾಲಿಗಳಿಗೆ ಕೈಲಾಗದವರಿಂದ ಹೀಯಾಳಿಸಿಕೊಳ್ಳುವುದು ಎಂದೂ ತಪ್ಪಿದ್ದಲ್ಲವೆಂದು ತೋರುತ್ತದೆ. ಮಹಾ–ಧರ್ಮಾವತಾರ, ತಾವು ಒಬ್ಬರ ಬೆನ್ನ ಹಿಂದೆ ಅವರ ಮೇಲಿನ ಆರೋಪಗಳನ್ನು ಕೇಳಿ ಅವರನ್ನು ಅಪರಾಧಿಗಳೆಂದು ತೀರ್ಪು ಕೊಡಬಾರದಾಗಿ ನಾನು ಸೆರಗೊಡ್ಡಿ ಬೇಡಿಕೊಳ್ಳುತ್ತೇನೆ. ತೋಳನಿಗೂ ಕರಟಕನಿಗೂ ಎಂದಿನಿಂದಲೂ ನಂಟು. ನಂಟು.ಇದ್ದವರು ಗಂಟಲಿಗೆ ಗಾಳರು ಆದ ಕಾರಣವೇನಿರಬಹುದು? ಇವರಿಬ್ಬರೂ ಜೀವದ ಗೆಳೆಯರಾಗಿದ್ದುದನ್ನು ನಾನು ಬಲ್ಲೆ, ಮಹಾಸ್ವಾಮಿ. ತಾನು ಗಂಡಾಂತರದಲ್ಲಿ ಸಿಲುಕಿಕೊಂಡು ಗೆಳೆಯ ತೋಳಗೆ ಉಪಕಾರ ಮಾಡಿದುದನ್ನು ನಾನೇ ಕಣ್ಣಾರೆ ಕಂಡಿದ್ದೇನೆ. ತಾವು ಅಪ್ಪಣೆ ಕೊಡಿಸಿದರೆ, ತಮ್ಮ ಅಡಿಯಲ್ಲಿ ಅದನ್ನು ನಿವೇದಿಸಲು ಈ ಸೇವಕನು ಸಿದ್ಧನಾಗಿದ್ದಾನೆ, ದೊರೆ."

“ ಆಗಲಿ” ಮೃಗೇಂದ್ರನು ಒರೆದನು. “ ಯಾವಾಗಲೂ ಇದೇ ಹಾಡು. ಒಮ್ಮತವು ಆಕಾಶಪುಷ್ಪವೆಂಬಂತೆ ತೋರುತ್ತದೆ. ಮಾತು ಮಾತಿಗೂ ಭಿನ್ನಾಭಿಪ್ರಾಯಗಳು! ಪ್ರಾಮಾಣಿಕ ಮತಭೇದಗಳು! ಈ ಮತಮತಾಂತರಗಳ ಎಳೆದಾಟದ ಗೊಂದಲದಲ್ಲಿ ಸತ್ಯವೆಂಬುದು ನಾಚಿ, ತೆರೆ ಮರೆಯ ಹೆಣ್ಣಿನಂತೆ ಎಲ್ಲಿಯೊ ಹುದುಗಿಕೊಂಡು ಕುಳಿತಿರುತ್ತದೆ. ಆಗಲಿ. ಕರಟಕನ ವಿಚಾರಣೆಯು ಪೂರ್ಣವಾಗಬೇಕಾದರೆ, ಎರಡೂ ಪಕ್ಷಗಳ ಖಂಡನ ಮಂಡನಗಳನ್ನು ಕೇಳಿಕೊಳ್ಳುವುದು ನನ್ನ ಕರ್ತವ್ಯವೆ ಆಗಿದೆ. ಏಕೆಂದರೆ ಸತ್ಯವನ್ನು ಬಯಲಿಗೆ ಎಳೆಯುವುದಕ್ಕೆ, ರಾಜ್ಯವ್ಯವಹಾರದಲ್ಲಿ ಇದಕ್ಕಿಂತಲೂ ಬೇರೆ ದಾರಿಯೆ ತೋರುವುದಿಲ್ಲ. ಆದರೆ ಸತ್ಯವನ್ನು ಬಯಲಿಗೆ ಎಳೆವ ಗಡಿಬಿಡಿಯಲ್ಲಿ, ಅದು ಅರೆಜೀವ—ನಿರ್ಜೀವವಾಗದಂತೆ ಎಚ್ಚರವಡುತ್ತಿರಬೇಕು. ಇಲ್ಲವಾದರೆ ಸತ್ಯದ ಹೆಸರಿನಲ್ಲಿ ಜೀವವಿಲ್ಲದ ದೇಹವು ಮಾತ್ರ ನಮ್ಮ ಕೈಗೆ ಬರುವ ಸಂಭವವೆ ಹೆಚ್ಚಾಗಿದೆ. ಏನು ಗಿಡುಗರಾಯ, ಕರಟಕನ ಪರವಾಗಿ ನಿನಗೆ ಹೇಳಬೇಕಾದುದೇನಾದರೂ ಇದ್ದರೆ ಬಣ್ಣಬಳೆಯದೆ ಇದ್ದುದನ್ನು ಇದ್ದಂತೆ ವಿವರಿಸು.”

ಎಂದು ಮೃಗೇಂದ್ರನ ಅಪ್ಪಣೆಯಾದೊಡನೆ ಗಿಡುಗನೆಂದನು :

“ ನಾನು ಬಾನಿನಲ್ಲಿ ಹಾರಾಡುತ್ತಿದ್ದಾಗ ನನ್ನ ಕಣ್ಣಿಗೆ ಬಿದ್ದ ಸಂಗತಿಯಿದು; ಕರಟಕನೂ ತೋಳನೂ ಆಗ ಪರಮ ಮಿತ್ರರು. ಪಾಲುಗಾರಿಕೆಯ ವ್ಯವಹಾರ ಮಾಡುತ್ತಿದ್ದರು. ಒಂದು ದಿನ ಇಬ್ಬರೂ ಹಸಿದು, ಆಹಾರವನ್ನು ಹುಡುಕುವುದಕ್ಕಾಗಿ ಹೊರಹೊರಟಿದ್ದರು. ಅನಿತರಲ್ಲಿ ಮೀನ ತುಂಬಿದ ಒಂದು ಬಂಡಿಯು ಆ ದಾರಿಯಿಂದ ಸಾಗಿತ್ತು. ತೋಳನಿಗೆ ಮೀನುಗಳೆಂದರೆ ಉಳಿದುದೇನೂ ಬೇಡ. ಬಾಯಿಗೆ ನೀರು ಊರಿತು. ನಾಲಿಗೆಯಿಂದ ತುಟಿ ಸವರುವುದಕ್ಕೆ

ಆರಂಭವಾಯ್ತು. ಅದನ್ನು ಕಂಡು ನರಿಯಣ್ಣನು, ‘ಗೆಳೆಯಾ, ಸುಮ್ಮನೆ ಬಾಯಿ ಚಪ್ಪರಿಸುವುದೇಕೆ? ಜೀವವನ್ನು ಕೊರಗಿಸುವು ದೇಕೆ? ಸದ್ದಿಲ್ಲದೆ ಹೋಗಿ ಒಂದಿಷ್ಟು ಮೀನ ತಂದು ಅಂತರಾತ್ಮನಿಗೆ ನೈವೇದ್ಯವನ್ನು ಸಮರ್ಪಿಸಿ ತೃಪ್ತಿಪಡಿಸಬಾರದೆ?’ ಎಂದನು.

ಆಗ ತೋಳನು ‘ನಾನು ಹಸಿವಿನಿಂದ ನಿಃಶಕ್ತನಾಗಿದ್ದೇನೆ, ಈಗ. ಇನ್ನು ಮುಂದೆ ಒಂದಡಿಯಿಡುವುದಕ್ಕೂ ನನಗೆ ಬಲವಿಲ್ಲ. ಅನುವು–ಆಪತ್ತುಗಳಲ್ಲಿ ನೆರವಾಗುವವನೇ ಗೆಳೆಯನಲ್ಲವೆ? ಮಿತ್ರವರ್ಯ, ನೀನು ಸಾಸಿಗನೂ ಅಹುದು. ಬೇಕಾದಂತಹ ಕುತ್ತಗಳಿಗೂ ಔತಣ ಕೊಟ್ಟು, ಅವುಗಳೊಳಗಿಂದ ಕೂದಲೂ ಕೊಂಕದಂತೆ ಪಾರಾಗುವ ಹಂಚಿಕೆ, ಮತ್ತು ಸಮಯ ಸೂಚಕತೆಗಳು ನಿನ್ನಂತೆ ನನ್ನಲ್ಲಿ ಇಲ್ಲ. ನಿನ್ನ ಅನುಯಾಯಿ ನಾನು,’ ಎಂದು ಬಿನ್ನವಿಸಿಕೊಂಡನು.

ನರಿಯಣ್ಣನಿಗೆ ಗೆಳೆಯನಲ್ಲಿ ಕರುಣೆಯುಂಟಾಯ್ತು. ಆ ಬಂಡಿಯೊಳಗಿನ ಮೀನಗಳನ್ನು ದೊರಕಿಸುವ ಹಂಚಿಕೆ ಹಾಕಿದನು. ಬಂಡಿ ಬರುವ ದಾರಿಯಲ್ಲಿ ಸ್ವಲ್ಪ ಮುಂದೆ ಹೋಗಿ ಕರಟಕನು ಸತ್ತವನಂತೆ ಬಿದ್ದುಕೊಂಡನು. ಬಂಡಿಯವನು ದೂರದಿಂದಲೆ ತಾನು ನರೀ ಮೋರೆಯನ್ನು ಕಂಡೆನೆಂದು ಹಿಗ್ಗಿದನು. ಬಂಡಿಯನ್ನು ನಿಲ್ಲಿಸಿ ನರಿಯ ಬಳಿಗೆ ಹೋಗಿ ನಿಟ್ಟಿಸಿದನು. ನರಿಗೆ ಉಸುರಾಡುತ್ತಿದ್ದಿಲ್ಲ. ಬಂಡಿಯವನಿಗೆ ನರಿಯ ಚರ್ಮ ಮಾರಿ ಲಾಭ ಪಡೆಯಬೇಕೆಂಬ ಆಸೆ ತಲೆದೋರಿತು. ‘ಚೆನ್ನಾಯ್ತು’ ಮನದಲ್ಲಿ ಅವನೆಂದನು. ‘ಇದರ ಜೊಂಡಬಾಲವೆ ನನಗೆ ಮೂರಿಪ್ಪತ್ತು ರೂಪಾಯಿ ಕೊಡಿಸಬಹುದು; ಮೇಲೆ ಮತ್ತೆ ತೊಗಲಿನ ಬೆಲೆ ಬೇರೆ!’ ಹೀಗೆಂದವನೆ ಕರಟಕನನ್ನು ಎತ್ತಿ ಬಂಡಿಯಲ್ಲಿ ಮೀನಗಳ ಚೀಲಗಳ ಮೇಲೆ ಚೆಲ್ಲಿದನು. ಮೊದಲೆ ಗೊತ್ತು ಮಾಡಿಕೊಂಡಂತೆ ತೋಳನು ಬಂಡಿಯ ಹಿಂದಿನಿಂದ ಸದ್ದಿಲ್ಲದೆ

ಹೊರಟನು. ದಾರಿಯುದ್ದಕ್ಕೂ ಕರಟಕನು ಬಂಡಿಯವನಿಗೆ ಗೊತ್ತಾಗದಂತೆ ಮೀನುಗಳನ್ನು ಆಗಾಗ ಕೆಳಕ್ಕೆ ನೂಕುತ್ತಿದ್ದನು.

ತನಗೂ ತೋಳನಿಗೂ ಮನದಣಿ ತಿನ್ನಲು ಸಾಕೆನಿಸುವಷ್ಟು ಮೀನಗಳನ್ನು ತಾನು ಕೆಳಕ್ಕೆ ಎರಚಿದೆನೆಂದು ಬಗೆದು, ಕರಟಕನು ಬಂಡಿಯಿಂದ ಅಲಕ್ಕನೆ ಜಿಗಿದು ತೋಳನಿದ್ದಲ್ಲಿಗೆ ಓಡಿದನು. ಇನ್ನು ತನ್ನ ಗೆಳೆಯನು ತನ್ನನ್ನು ಕೃತಜ್ಞತೆಯಿಂದ ಹೇಗೆ ಬರಮಾಡಿಕೊಳ್ಳಬಹುದು, ಆಗ ತಾನು ಆತನಿಗೆ, ಅದರಲ್ಲೇನು ಮಹಾ, ಕೇವಲ ಮಿತ್ರಕಾರ್ಯ ಮಾಡಿದ್ದಕ್ಕೆ ನೀನೇಕೆ ಇಷ್ಟು ಅಭಿನಂದಿಸುವೆ, ಎಂದು ಸೌಜನ್ಯದಿಂದ ಹೇಗೆ ಹೇಳಬಹುದು; ಆದರೂ ಆತನು, ತನಗೆ ತುಂಬ ಪ್ರೀತಿಯಿಂದ ಒಳ್ಳೊಳ್ಳೆಯ ಮೀನಗಳನ್ನೇ ಆಯ್ದು ಹೇಗೆ ಕೊಡಬಹುದು, ಪ್ರೀತಿಯಿಂದಲೆ ಪ್ರೀತಿಯು ಬೆಳೆಯುತ್ತದೆಂಬುದನ್ನು ತಾನು ಲೋಕಕ್ಕೆಲ್ಲ ಹೇಗೆ ಪ್ರತ್ಯಕ್ಷವಾಗಿ ತೋರಿಸಿಕೊಡಬಹುದು, ಎಂದು ಮುಂತಾಗಿ ಎಣಿಕೆ ಹಾಕುತ್ತ ತೋಳನಿದ್ದಲ್ಲಿಗೆ ಕರಟಕರಾಯನು ಬಂದರೆ, ಅಲ್ಲೇನಿದೆ!

ತೋಳನು ತನ್ನ ಊಟವನ್ನೆಲ್ಲ ಮುಗಿಸಿ ತೇಗುತ್ತಲಿದ್ದನು. ಕರಟಕನಿಗೆ ಏನೂ ತೋಚದಾಗಿ ಕೇಳಿದನು: ‘ಗೆಳೆಯಾ, ನನ್ನ ಪಾಲು ಎಲ್ಲಿದೆ?’ ‘ನಿನ್ನ ಪಾಲು! ಪರೋಪಕಾರಿಗಳಿಗೆ ಪಾಲು ಏತಕ್ಕೆ? ಪ್ರತಿಫಲದ ಅಪೇಕ್ಷೆಯಿಲ್ಲದೆ ನೆರವಾಗುವುದೇ ಮಹಾತ್ಮರ ಗುಣವಲ್ಲವೆ?’ ತೋಳನು ಮುಂದೆ ನುಡಿದುದೇನಂದರೆ: ‘ನೀನು ಬರಲು ತಡವಾಗಬಹುದೆಂದು ಭಾವಿಸಿ, ಮೀನಿನ ಕೆಡಬಹುದಾದ ಮೇಲ್ಭಾಗವನ್ನು ಸುಲಿದು, ಹೆಚ್ಚು ದಿನ ತಾಳುವ, ಬಹುದಿನ ಬಾಳುವ ಒಳಭಾಗವನ್ನೇ ನಿನಗಾಗಿ ಒಟ್ಟಿ ಇರಿಸಿದ್ದೇನೆ, ಇಕೊ!’ ಎಂದು ಅಲ್ಲಿ ರಾಶಿಯಾಗಿದ್ದ ಎಲುವುಗಳ ಕಡೆಗೆ ಬೆರಲುಮಾಡಿದವನೆ ಗಾಳಿಗೆ ಗರಿಮೂಡಿದಂತೆ ವೇಗ

ಬಿಟ್ಟನು!

'ಹುಂ' ಮೃಗೇಂದ್ರನೆಂದನು. 'ಮತ್ತೇನಾದರುಂಟೆ, ನಿನಗೆ ಹೇಳುವುದು?'

'ಉಂಟು, ಮಹಾಪ್ರಭು.' ಗಿಡುಗನೆಂದನು. 'ಇನ್ನೊಂದೆಡೆ ಯಲ್ಲಿ ಮೇಜವಾನಿಗಾಗಿ ಸೀಳಿದ ಹಂದಿಯು ಸಾತ ಬಂತು ಇವರಿಗೆ. ಅಡುವವರು ಬೇರೆ ಅಡುಗೆಯ ಸಂಭ್ರಮದಲ್ಲಿದ್ದಾಗ, ತೋಳನ ಹೇಳಿಕೆ ಯಂತೆ ನರಿಯಣ್ಣನು ಮೆಲ್ಲನೆ ಹಿತ್ತಿಲ ದಿಡ್ಡಿಯಿಂದ ಒಳಹೊಕ್ಕನು. ಹಂದಿಯು ಒಂದು ಗೂಟಕ್ಕೆ ನೇತಾಡುತ್ತಿತ್ತು. ಅದನ್ನು ಸೆಳೆದೊಯ್ವ ಅಸವಸದಲ್ಲಿ ಗೋಡೆಯ ಗೂಟ ಸಹಿತ ಕಿತ್ತಿ ಹಂದಿಯು ಬಾಡು ಕೆಳಕ್ಕೆ ಬಂದಿತು. ಆದರೂ ಎದೆಗೆಡದೆ ಕರಟಕನು ಅದೆಲ್ಲವನ್ನೂ ಎತ್ತಿ, ಹೊರಗೆ ನಿಂತಿದ್ದ ತೋಳನೆಡೆಗೆ ಎಸೆದನು. ಅಷ್ಟರಲ್ಲಿ ಅಡುವವ ನೊಬ್ಬನು ಕೈಯಲ್ಲಿ ಸಟ್ಟುಗವನ್ನು ಹಿಡಿದುಕೊಂಡು ಬರುತ್ತಿದ್ದುದರ ಸುಳುವು ಹತ್ತಿದೊಡನೆಯೇ ಕರಟಕನಿಗೆ ಅಲ್ಲಿಯೆ ಇದ್ದ ಕಿಟಕಿಯೊಳ ಗಿಂದ ಟಣ್ಣನೆ ಹಾರಬೇಕಾಯ್ತು. ಆತನ ದುರ್ದೈವದಿಂದ ಅಲ್ಲಿ ನಾಯಿ ತಂಡವೊಂದಿತ್ತು. ನಾಯ್ಗಳ ಬಾಯಿಗೆ ಬೀಳಬಾರದೆಂದು ಕರಟಕನಿಗೆ ಜೀವದ ಹಂಗುತೊರೆದು ನಾಗಾಲೋಟವನ್ನು ಆರಂಭಿಸ ಬೇಕಾಯ್ತು. ಗಾಳಿಯ ಗೂಡ ಜಿದ್ದಿನಂತಿದ್ದ ಓಟವದು! ಅಂತೂ ಇಂತೂ ನರಿಯಣ್ಣ ನಾಯ್ಗಳನ್ನು ಹಿಂದಿಕ್ಕಿ ಗಿಡಗಳ ಗುಂಪಿನಲ್ಲಿ ನುಸಿಳಿ ಕೊಂಡು ಪಾರಾದನು. ಓಡಿ ಓಡಿ ದಣಿದಿದ್ದನು. ಕಾಲು ಮಾತ ನಾಡುತ್ತಿದ್ದುವು. ಹೊಟ್ಟೆಯಲ್ಲಿ ಹಸಿವು ಪಾತ್ರವಾಡುತ್ತಿತ್ತು. ತೋಳ ರಾಯನು ಹಿಂದಿನ ಬಾರಿ ತಾನು ಮಾಡಿದುದು ತಪ್ಪಾಯಿತೆಂದು ಕಣ್ಣೀ ರಿಟ್ಟು ಕ್ಷಮೆ ಬೇಡಿದುದರಿಂದ ಕರಟಕನು ಈ ಸಾರೆ ತನ್ನ ಪಾಲು ತನಗೆ ದೊರೆಯುವುದೆಂದು ನೆರೆ ನಂಬಿದ್ದನು. ನಂಬಿ ತೋಳನಲ್ಲಿಗೆ ಹಸಿದು

ಹಣ್ಣಾಗಿ ಬಂದನು. ಆಗ ತೋಳನು ಏನು ಹೇಳಬೇಕು, ಮಹಾ ಸ್ವಾಮಿ? ' ನೀನು ಕಿಟಕಿಯಿಂದ ಚೆಲ್ಲಿದ ಮಾಂಸದ ಮುದ್ದೆಯು ಹುಡಿಯಲ್ಲಿ ಬಿದ್ದು, ಮಣ್ಣು ಮೆತ್ತಿತು. ಇಂತಹ ಹುಡಿಗೂಡಿದ ಬಾಡವನ್ನು ಮಂತ್ರಿವರ್ಯ ಕರಟಕರಾಯನಿಗೆ ಕೊಡಲು ನನ್ನ ಮನಸು ಒಪ್ಪಲಿಲ್ಲ. ಕ್ಷಮಿಸು. ನಿನ್ನ ಕ್ಷುಧಾಶಾಂತಿಯ ಸಲುವಾಗಿ ನಾನು ಏನೊಂದು ಹುಡಿಕಿಕೊಂಡು ತರುತ್ತೇನೆ. ಸ್ವಲ್ಪ ತಾಳು ' ಎಂದು ನೆಪ ಹೇಳಿ ಅಲ್ಲಿಂದ ಮಾಯವಾಯಿತು.

' ಏನು ಸರದಾರ ತೋಳಪ್ಪನವರೆ ' ಮೃಗೇಂದ್ರನು ಕೆರಳಿ ಗರ್ಜಿಸಿದನು. ' ಬಾವೀ ತೋಡ ಹೋಗಿ ಬೇತಾಳ ಹೊರಟಿತಲ್ಲ! ಕರಟಕನು ನಿಮಗೆ ಮಾಡಿದ ಮೋಸ ಹೇಳ ಹೋಗಿ ನಿಮ್ಮ ಮೋಸವೆ ಹೊರಬಿದ್ದಿತಲ್ಲ! ಇದಕ್ಕೆ ಪ್ರತಿಯಾಗಿ ನಿಮಗೆ ಏನಾದರೂ ಹೇಳುವು ದಿದೆಯೆ? '

ತೋಳನಿಗೆ ಮಾರುತ್ತರಕ್ಕೆ ಇಂಬುಗೊಡದೆಯೆ ಗಿಡುಗವು ನಡುವೆ ಮತ್ತೆ ಕೂಗಿಕೊಂಡಿತು. ' ಮಹಾಪ್ರಭು, ಆದುದಾಯ್ತು ಹೋಯ್ತು; ಮಿಂಚಿಹೋದ ಮಾತಿಗೆ ಚಿಂತಿಸಿ ಫಲವೇನು? ಇದೀಗ ಕರಟಕನಿಗೆ ಅದಾವ ಐಹಿಕ ಸುಖೋಪಭೋಗಗಳಲ್ಲಿಯೂ ಆಸಕ್ತಿಯಿಲ್ಲದಾಗಿದೆ. ಪಶ್ಚಾತ್ತಾಪದಗ್ಧ ಹೃದಯನಾಗಿ ಈಗ ಆತನು ಶಿವಶರಣನಾಗಿದ್ದಾನೆ. ತೋಳನಿಗೂ ಈ ಪದವಿಪಟ್ಟಗಳ ಹಂಬಲ ತೊರೆದು ಹರಿದಾಸನಾಗಲು ಆತನು ಸೂಚಿಸಿದನು. ಆದರೆ ಮನಸಿನ ಉಪರತಿಯಾಗುವುದಕ್ಕೂ ಪೂರ್ವಜನ್ಮದ ಪುಣ್ಯವು ಬೇಕಲ್ಲವೆ, ದೇವ? ವಿಶ್ರಾಮವೇತನವನ್ನು ಪಡೆದ ಬಳಿಕ ತೀರ್ಥಯಾತ್ರೆಗಳನ್ನು ಮಾಡುತ್ತ ಮೊದಲಿನ ತಮ್ಮ ಪಾಪಗಳನ್ನು ತೊಳಕೊಳ್ಳುವ ಸಂಪ್ರದಾಯವು ನಮ್ಮಲ್ಲಿ ಅನಾದಿಕಾಲ ದಿಂದಲೂ ಬಂದಿಲ್ಲವೆ? ಕರಟಕನು ತಮ್ಮ ಕೆಲಸದಿಂದ ಬಿಡುಗಡೆ

ಹೊಂದುವ ಮೊದಲೆ, ತಾನಾಗಿಯೇ ಇಂದು ಚತುರ್ಥಾಶ್ರಮವನ್ನು ಸ್ವೀಕರಿಸಿದ್ದುದು ಅಭಿನಂದನೀಯವಲ್ಲವೆ? ಈಗ ಧಾರಣೆ, ಪಾರಣೆ ವ್ರತವನ್ನು ಕೈಕೊಂಡುದರಿಂದ ಆತನು ತೀರ ನಿಃಶಕ್ತನಾಗಿರುವನು. ಈ ಕಾರಣದಿಂದಲೆ, ಇಂದಿನ ಈ ಸುವರ್ಣ–ಮಹೋತ್ಸವಕ್ಕೆ ಆತನು ಬರಲು ಅಸಮರ್ಥನಾಗಿದ್ದಾನೆ. ”

ಆ ಹಕ್ಕಿಯ ಮಾತು ಕೇಳಿ, ಅಲ್ಲಿದ್ದ ಗಿಳಿ, ಪಾರಿವಾಳಗಳು ‘ ಆಹಾ! ಏನು ಕರಟಕನ ಕೈವಾರ! ವಕಾಲತ್ತು! ಸಮಾನಶೀಲರಲ್ಲಿಯೆ ಅಲ್ಲವೆ ಸಖ್ಯವಾಗುವುದು? ಸರಿ. ಕರಟಕನ ಕೈವಾರಿ ಯಾರು ಮತ್ತೆ? ಗಿಡುಗ! ಗಿಡುಗನೆಂದರೆ ಕಿಡುಕ; ಕೆಡುಕನೆಂದು ಜನಗಳು ಹೇಳುವುದು ಹುಸಿಯಲ್ಲ. ’ ಎಂದು ಉಸಿರಿದುವು.

ಇನಿತರಲ್ಲಿ ದೂರದಿಂದ ಒಂದು ಆರ್ತ ನಾದವು ಕೇಳ ಬಂದಿತು. ‘ ಅಯ್ಯೋ ಕಂದಾ! ಪಿಳ್ಳೆ! ಅದಾವ ಮಾರಿ, ಮಸಣಿಯ ಹೆಸರಿನಿಂದಾದರೂ ಮರಣ ಬಂದಿದ್ದರೆ, ನಿನಗೆ ಸ್ವರ್ಗಸಿಕ್ಕಿತೆಂದು ಒಂದು ಬಗೆಯ ಸಮಾಧಾನವನ್ನಾದರೂ ನಾವು ಪಡೆಯುತ್ತಿದ್ದೆವು! ಆದರೆ ಇದೇನು? ಅಪಮೃತ್ಯು! ’ ಎಂದು ಮುಂತಾಗಿ ಕೂಗಿ ಗೋಗರೆಯುತ್ತ ಕೋಳಿ ಹಿಂಡು ಆಸ್ಥಾನದೆಡೆಗೆ ಬರುತ್ತಲಿದ್ದುದು ಕಂಡುಬಂತು. ಒಂದು ಹುಂಜ, ಮತ್ತು ಒಂದು ಹೇಂಟೆಯು ಪಿಳ್ಳೆಯೊಂದನ್ನು ಅವಚಿಕೊಂಡು ಮುಂದೆ ಇದ್ದುವು. ಹಿಂದೆ ಹಲವು ಹಿರಿ–ಕಿರಿ ಕೋಳಿಗಳ ತಂಡ. ಅವಚಿಕೊಂಡು ತಂದ ಪಿಳ್ಳೆಯ ದಡದಿಂದ ನೆತ್ತರು ಬಸಿಯುತ್ತಿತ್ತು; ಅದರ ಮುಂಡವೆ ಇದ್ದಿಲ್ಲ, ಬರಿ ಅಟ್ಟೆ. ಮೈತುಂಬ ಗಾಯಗಳು. ನೋಡಿದರೆ ಮೈಗೆ ಮುಳ್ಳು ಬರುತ್ತಿತ್ತು. ಕೋಳಿಗಳೆಲ್ಲವೂ ದುಃಖದಿಂದ ಬಿಟ್ಟೂಬಿಡದೆ ಚಿಟ್ಟನೆ ಚೀರುತ್ತಿದ್ದುವು.

'ಎಲಾ, ಇದೇನು ಕೋಳಿಗಳ ಮೊರೆ?' ಮೃಗೇಂದ್ರನು ಚಿಂತಾತುರ ನೋಟದಿಂದ ಹೆಬ್ಬಾಗಿಲತ್ತ ನಿರೀಕ್ಷಿಸಿದನು. ಕೋಳಿಗಳ ತಂಡವೊಂದು ಒಳಗೆ ಬಂದು ನೆಲಮುಟ್ಟಿ ತಲೆಬಾಗಿ ನಿಂತುಕೊಂಡಿತು. ಆ ತಂಡದ ಹಿರಿಯ ಹುಂಜವು ತನ್ನ ಬಳಗದ ಅಳಲನ್ನು ಅರಿಕೆಮಾಡಿಕೊಳ್ಳಲು ಸ್ವಲ್ಪ ಮುಂದುವರೆದಿತು.

"ಜೀಯಾ, ನಮ್ಮ ಬಾಳಿನ ಗೋಳನ್ನು ಎಷ್ಟೆಂದು ಹೇಳಲಿ?" ಹುಂಜವೆಂದಿತು. "ನಾವು ನಿಮ್ಮ ವಂದಿ–ಮಾಗಧರು; ಸೂಳಾಯ್ತರು. ನಮ್ಮ ಸೂಳು (ಸರತಿ) ನಸುಕಿನಲ್ಲಿ ಉಷ್ಣವಡವನ್ನು ಹಾಡುವುದು. ಜುಮುಜುಮು ನಸುಕಿನಲ್ಲಿ ಮಹಾಸ್ವಾಮಿಯವರು ತಮ್ಮ ಸುಷುಪ್ತಿಗೆಯಿಂದ ಉಷ್ಣವಡಿಸುವುದಕ್ಕೆ ಅನುಕೂಲವಾಗುವಂತೆ ಉದಯರಾಗವನ್ನು ಹೇಳುವ ತಮ್ಮ ಅಡಿಯಾಳುಗಳು ನಾವು. ಚಳಿಯಿರಲಿ, ಮಳೆಯಿರಲಿ, ನಮ್ಮ ಕೈಕೊಂಡ ಕೆಲಸಕ್ಕೆ ಎಂದೂ ತಪ್ಪಿದವರಲ್ಲ. ಭೂಲೋಕದಲ್ಲಿ ಸೂರ್ಯದೇವನ ಸುಸ್ವಾಗತವನ್ನು ಬಯಸಲು ಎಲ್ಲರಿಂದಲೂ ಮೊದಲು ಎಚ್ಚತ್ತು ಕಣ್ತೆರೆವವರು ನಾವೇಯೆಂದು ಹೆಮ್ಮೆಯಿಂದ ಹೇಳಬಹುದು. 'ಕತ್ತಲೆಯು ಹಾಳಾಯ್ತು; ಬೆಳಕಿಗೆ ಗೆಲುವಾಯ್ತು; ಜನಗಳೇ ಬೇಗನೇಳಿ' ಎಂದು ಹಾಡುವ ಕವಿಗಳೂ, ನಾವೂ ಒಂದೇ. ಜನಗಳನ್ನು ಎಚ್ಚರಿಸಿದರೆ ನರಿಯಣ್ಣನಂತಹರಿಗೆ ನಮ್ಮ ಮೇಲೆ ಹಗೆ; ಏಕೆಂದರೆ ತಂತ್ರಗಾರರ ಕೈನಡೆಯುವುದು ಕತ್ತಲಲ್ಲಿಯೆ ಅಲ್ಲವೆ? ಬೆಳಕು ಎಂದರೆ ಅವರಿಗೆ ಆಗದು! ನನ್ನ ತಳಿಯನ್ನೇ ನಿರ್ಮೂಲ ಮಾಡಬೇಕೆಂದು ನರಿಯಣ್ಣನು ವೀಳ್ಯವನ್ನೆತ್ತಿದ್ದಾನಂತೆ, ಮಹಾರಾಜ! ಪರಮಾತ್ಮನು, ನನ್ನ ಸದ್ವಂಶವು ನಷ್ಟವಾದರೆ ಲೋಕಕ್ಕೆ ಕೇಡು ಎಂದೊ, ನನಗೆ ಸಂತಾನ ಶಕ್ತಿಯನ್ನೂ ತುಂಬ ದಯಪಾಲಿಸಿದ್ದಾನೆ. ನನಗೆ ಪಿಳ್ಳೆಗಳಿಗೆ ಕೊರತೆಯಿಲ್ಲವೆಂಬುದು ನಿಜವಾದರೂ ಅವು ನಾಶ

ವಾಗಲೆಂದು ಯಾರಾದರೂ ಹಾರೈಸಿದ್ದುಂಟೆ, ತಂದೆ? ಕಣ್ಣುಗಳು ಎರಡುಂಟೆಂದು ಅಥವಾ ಬೆರಲುಗಳು ಹತ್ತುಂಟೆಂದು ಅವುಗಳಲ್ಲಿ ಒಂದನ್ನು ಕಳೆದುಕೊಂಬ ಬುದ್ಧಿವಂತರನ್ನು ಕಾಣಬಹುದೆ?

"ನರಿಯಣ್ಣನ ಹಗೆತನವನ್ನು ಅರಿತುದರಿಂದಲೇ ನಾವು ನಮ್ಮ ಮನೆಗಳ ನೆರೆಹೊರೆಯಲ್ಲೂ ಆತನನ್ನು ಸುಳಿಯಗೊಡುತ್ತಿದ್ದಿಲ್ಲ. ಆದರೆ ಮೊನ್ನೆ ನಮ್ಮ ನಾಡಿನಲ್ಲಿ ಒಂದು ಡಂಗುರ ಸಾರಿದುದು ಕೇಳಬಂತು; 'ಕರಟಕರಾಯನು ಇನ್ನು ಮೇಲೆ ಬಲಹೀನರ ಬೆಂಬಲಿಗನಾಗಿ, ಅವರ ಉದ್ಧಾರಕ್ಕಾಗಿಯೇ ಇನ್ನುಳಿದ ತನ್ನ ಆಯುಷ್ಯವನ್ನು ಮೀಸಲಾಗಿರಿಸಿದ್ದಾನೆ. ಅದರ ಲಾಭ ಪಡೆಯಿರಿ, ನಿರ್ಬಲ-ಕೂಟಕ್ಕೆ ಸೇರಿರಿ; ಸಂಘೇ ಶಕ್ತಿಃ ಕಲೌ ಯುಗೇ— ಢಂ, ಢಂ, ಢಂ.' ಎಂದು ಸಾರಿದುದನ್ನು ಕೇಳಿ ನಮಗೆ ಮುಗಿಲು ಮೂರೇ ಬೆರಲು ಉಳಿಯಿತು. ಮರುದಿನ 'ಕೂಟದ ಓಲೆ' ಎಂಬ ಪತ್ರಿಕೆಯಲ್ಲಿ ಇದನ್ನು ಕುರಿತೇ ಒಂದು ಹಿರಿ ಬರೆಹವು ಇದ್ದಿತು: 'ಇನ್ನು ಮೇಲೆ ಈ ಮಾನವ-ರಕ್ಕಸರಿಗೆ ಬೆದರಬೇಕಿಲ್ಲ. ಮಾಂಸ ಭಕ್ಷಕ ಕ್ರೂರ ಶ್ವಾಪದಗಳಿಗೆ ಹೆದರಬೇಕಿಲ್ಲ. ಕರಟಕನಂತಹ ಬುದ್ಧಿವಂತನು ನಮ್ಮ ಪಕ್ಷವನ್ನು ವಹಿಸಿದ್ದಾನೆ. ಒಂದೊಂದು ಪ್ರಾಣಿವರ್ಗವು ಒಂದೊಂದು ರಾಷ್ಟ್ರವಿದ್ದಂತೆ. ಹಿರಿಯ ರಾಷ್ಟ್ರಗಳು ಕಿರಿಯ ರಾಷ್ಟ್ರಗಳನ್ನು ನುಂಗುವ ಅಧಮ ಪದ್ಧತಿಯನ್ನು ನಿಲ್ಲಿಸಿ ಬಿಡುವುದಕ್ಕಾಗಿ, ನಿರ್ಬಲರಾಷ್ಟ್ರಗಳನ್ನು ಸಂರಕ್ಷಿಸುವುದಕ್ಕಾಗಿ ಮಾನವ ಜನಾಂಗದ ಉದ್ಧಾರಕರು ರಾಷ್ಟ್ರಸಂಘವನ್ನು ಸ್ಥಾಪಿಸಿರುವಂತೆ, ಕರಟಕರಾಯನು, ಕುರಿ, ಕೋಳಿ, ಮೊಲ ಮೊದಲಾದ ಅಲ್ಪ-ವರ್ಗದವರನ್ನು ಕಾಪಾಡುವುದಕ್ಕಾಗಿ ನಿರ್ಬಲರ ಕೂಟವೆಂಬ ಒಂದು ಮಹಾಸಮಿತಿಯನ್ನು ವಿರಚಿಸಿದ್ದಾನೆ. ಅದರ ಸದಸ್ಯರಾದವರಿಗೆ ಈ ಲೋಕದಲ್ಲಿ ಯಾರಿಗೂ ಅಳುಕಿ ನಡೆಯಬೇಕಾಗಿಲ್ಲ. ಅವರೆಲ್ಲರ ಸ್ವಾತಂತ್ರ್ಯಕ್ಕಾಗಿ

ಹೆಣಗಾಡುತ್ತಿರುವ ಕರಟಕರಾಯನಿಗೆ ತನುಮನಧನದಿಂದ ನೆರವಾಗು ವುದು ಪ್ರತಿಯೊಬ್ಬರ ಕರ್ತವ್ಯವಾಗಿದೆ;' ಎಂಬುದೆ ಆ ಬರೆಹದ ಸಾರವಾಗಿತ್ತು.

"ಆಮೇಲೆ ಒಂದು ದಿನ ನರಿಯಣ್ಣನು ತುಂಬ ಸಾಧುರೀತಿಯಲ್ಲಿ ನಮ್ಮಲ್ಲಿ ಬಂದನು. ನಿರ್ಬಲ-ಕೂಟದ ಸದಸ್ಯರಾಗುವುದಕ್ಕಾಗಿ ನಮ್ಮನ್ನು ಬಿನ್ನವಿಸಿಕೊಂಡನು. ನಮ್ಮಲ್ಲಿ ಅನೇಕರಿಗೆ ಆತನ ಮಾತಿನಲ್ಲಿ ನಂಬುಗೆಯುಂಟಾಗಲಿಲ್ಲ. ಆದರೂ ಹಲವರು ಅವನ ಬೆಂಬತ್ತಿದರು. ನರಿಯಣ್ಣನು ತನ್ನೊಡನೆ ಅನೇಕರನ್ನು ಕರೆದೊಯ್ದನು. ಸ್ವಲ್ಪ ದೂರ ಹೋಗುವಷ್ಟರಲ್ಲಿ ಅವರ ಮೇಲೆ ತಿರುಗಿಬಿದ್ದು ಒಬ್ಬೊಬ್ಬರನ್ನೇ ಬಕ್ಕರಿಸಹತ್ತಿದನು. ಇದನ್ನು ಕಂಡು ಒಂದು ವೀರಹುಂಜನು ನರಿಯ ಕಣ್ಣಿಗೆ ಹಾರಿ, ಕುಕ್ಕುವುದರೊಳಗಾಗಿ, ಅವನ ಬಾಯಿಗೇ ತುತ್ತಾದನು. ಆಗ ಉಳಿದ ಕೋಳಿಗಳು ಕಿರಚಿ ಕೀಸರಿಟ್ಟುವು. ಇನ್ನು ಇಲ್ಲಿ ನಿಂತರೆ ತರವಲ್ಲವೆಂದು ನರಿಯಣ್ಣನು ಪಲಾಯನ ಮಾಡಿದನು. ಪಲಾಯನದ ಅವಸರದಲ್ಲಿದ್ದಾಗಲೆ ಪೂರ್ಣ ತಿನ್ನಲಿಕ್ಕಾಗದೆ ನನ್ನ ಈ ಮರಿಯ ದಡವನ್ನು ಅಲ್ಲಿಯೆ ಚೆಲ್ಲಿದನು. ಆ ವೀರ ಹುಂಜನ ಹೇಂಟೆಯು ತನ್ನ ನಲ್ಲನ ಅಗಲುವಿಕೆಯನ್ನು ತಾಳಲಾರದೆ ಆತನ ಬದಿಯಲ್ಲಿಯೇ ತನ್ನ ದೇಹವನ್ನೂ ಈಡಾಡಿದಳು. ಮಹಾಪ್ರಭು, ಹೀಗಾದರೆ ನಮ್ಮಂತಹರು ಇನ್ನು ಬಾಳುವುದೆಂತು ?"

ಕರಟಕನ ಈ ಮೋಸಗಳನ್ನೆಲ್ಲ ಕೇಳಿ ಮೃಗೇಂದ್ರನು ವ್ಯಥೆಗೊಂಡನು. 'ಕೋಳಿಗಳೇ, ತಮ್ಮವರ ರಕ್ಷಣೆಯ ಸಲುವಾಗಿ, ಗಂಡರಿಗೆ ಒಪ್ಪುವಂತಹ ಶೌರ್ಯದಿಂದ ಹೋರಾಡಿ, ಸತ್ಕಾರ್ಯಕ್ಕಾಗಿ ಪ್ರಾಣಗಳನ್ನು ಅರ್ಪಿಸಿದ ಆ ಹುಂಜನ ಹೆಸರಿನ ಒಂದು ವೀರಗಲ್ಲು ನಿಲ್ಲಿಸಿರಿ; ಅವನ ಕೀರ್ತಿಯು ಶಾಶ್ವತವಾಗಿ ಉಳಿದು ಉಳಿದವರಿಗೆ ಅವನ ನಡೆ

ವಳಿಯು ಮೇಲ್ಪಂಕ್ತಿಯಾಗಲಿ. ತನ್ನ ರಮಣನಲ್ಲಿ ಅಸಾಧಾರಣ ಪ್ರೀತಿಯನ್ನು ವ್ಯಕ್ತಪಡಿಸಿದ ಆ ಹೇಂಟೆಯು ಲೋಕಕ್ಕೆಲ್ಲ ಆದರ್ಶ ಸತಿಯು. ಅವಳ ಹೆಸರಿನಲ್ಲೂ ಒಂದು ಮಾಸತಿ ಕಲ್ಲನ್ನು ನಿಲ್ಲಿಸಿರಿ.' ಎಂದು ಆಜ್ಞಾಪಿಸಿದನು. ಬಳಿಕ ಸ್ವಲ್ಪ ಆಲೋಚಿಸಿ, 'ಎಲೈ ಜಾಂಬುವಂತನೆ, ನೀನೀಗ ಕರಟಕನಲ್ಲಿಗೆ ಹೋಗಿ ಆತನನ್ನು ಮುಂದಿಟ್ಟು ಒಡಗೊಂಡು ಬಾ. ಈ ಕೆಲಸಕ್ಕೆ ಶ್ರೀಕೃಷ್ಣನಂತಹನನ್ನೂ ಹಣ್ಣುಮಾಡಿ ಹಿಡಿತದಲ್ಲಿ ತಂದ ನೀನೇ ಯೋಗ್ಯನು. ಆದರೂ ಎಚ್ಚರ; ನೀನೂ ಆ ಕರಟಕನ ಕೈವಾಡಕ್ಕೆ ಒಳಗಾಗದಿರು. ಇನ್ನು ಕಾಲಹರಣ ಬೇಡ. ಬೇಗ ಹೋಗಿ ಅವನನ್ನು ಅಟ್ಟಿಕೊಂಡು ಬಾ."

---

## ಕೈವಾಡ ೨



ಕರಟಕನನ್ನು ಹುಡುಕಲು ಜಾಂಬುವಂತನ ಸವಾರಿ ಹೊರಟಿತು. ಗಂಡಾಂತರಗಳು ಹೆಚ್ಚಿದಾಗ ಕರಟಕನು ಅವಿತುಕೊಳ್ಳುವ ಎಡೆಯು ಜಾಂಬುವಂತನಿಗೆ ಗೊತ್ತು. ಏಳು ಸುತ್ತಿನ ಗವಿ ಅದು. ಅದರಲ್ಲಿ ಎಷ್ಟೋ ಗುಟ್ಟಿನ ಹೋರುಗಳಿದ್ದುವು. ಹೊತ್ತು ಬಂದಾಗ ಅಲ್ಲಿ ಅಡಗಿದರೆ ಕರಟಕನ ಮೇಲೆ ಏರಿ ಹೋಗುವುದು ಯಾರಿಗೂ ಸಾಧ್ಯವಿದ್ದಿಲ್ಲ. ಕರಟಕನು ತನ್ನ ಬಳಗದವರೊಡನೆ ಅಲ್ಲಿ ಸುಖವಾಗಿ ಕೆಲಕಾಲ ಇರಬಹುದಾಗಿತ್ತು. ತನ್ನ ಮೇಲೆ ಕೈ ಮಾಡಬಂದ ಎದು

ರಾಶಿಗಳನ್ನು ಬಿಕ್ಕಟ್ಟಿನಲ್ಲಿ ಹಾಕುವ ಹಲವು ಹಂಚಿಕೆಗಳೂ ಅಲ್ಲಿದ್ದುವು.

ಜಾಂಬುವಂತನು ಕೋಟೆಯ ಹೆಬ್ಬಾಗಿಲಿಗೆ ಬಂದನು. ಕದಗಳು ಮುಚ್ಚಿದ್ದುವು. ಅಲ್ಲಿ ಯಾವ ಪ್ರಾಣಿಯ ಉಲಿವೂ ಕೇಳಬರಲಿಲ್ಲ. ಕರ್–ಗೊರ್ ಎಂದು ಕರಟಕನನ್ನು ಕರೆದು ಆಯ್ತು, ದಡದಡನೆ ಕದಗಳನ್ನು ನೂಕಿ ಆಯ್ತು. ಆವುದಕ್ಕೂ ಮಾರುತ್ತರವಿಲ್ಲ. ಕರಟಕನು ಏನೂ ಕೇಳದವನಂತೆ ತಣ್ಣಗಿದ್ದನು. ಜಾಂಬುವಂತನು ತನ್ನನ್ನು ಹಿಡಿಯುವುದಕ್ಕಾಗಿ ಹಿಂಡುಗಟ್ಟಿಕೊಂಡು ಹೊಂಚುಹಾಕಿರುವನೊ ಅಥವಾ ಒಬ್ಬನೆ ಬಂದಿರುವನೊ ಎಂಬುದನ್ನು ಗೊತ್ತುಮಾಡಿಕೊಳ್ಳದೆ ಬಾಗಿಲು ತೆರೆಪ ಮನಸಿದ್ದಿಲ್ಲ. ಗವಿಯ ಮೇಲ್ಮಾಡದಿಂದ ನೋಡಿ, ಕರಡೆರಾಯನು ಒರ್ವನೆ ಇರುವುದರ ಮನವರಿಕೆಯಾದೊಡನೆ ಕೆಳಗಿಳಿದು ತಲೆವಾಗಿಲು ತೆರೆದನು. ಜಾಂಬುವಂತನು ನೋಡುತ್ತಾನೆ, ಆತನೆದುರು ಕಾವಿಯ ಬಟ್ಟೆಯನ್ನುಟ್ಟು, ಕೈಯಲ್ಲಿ ಜಪಮಾಲೆಯನ್ನು ಹಿಡಿದು, ಅಖಂಡ ನಾಮಸ್ಮರಣೆಯನ್ನು ನಡೆಯಿಸಿದ ಕರಟಕರಾಯನು ನಿಂತಿದ್ದಾನೆ!

"ಶರಣು, ಶರಣು ಅಜ್ಜಯ್ಯ," ಕರಟಕನು ವಿನಮ್ರನಾಗಿ ನಮಸ್ಕರಿಸುತ್ತ ನುಡಿದುದೇನೆಂದರೆ, "ಇಂದು ನನಗೆ ಮೈಬೇನೆ ಹೆಚ್ಚಾಗಿಲ್ಲವಾದರೂ, ಮನದ ತುಂಬ ಬೇವಸ. ಬಿದೆ ಬಿದೆ ಬೆಂದು ಬೇಗುದಿಗೊಂಡಿದ್ದೇನೆ. ಶ್ರೀಮನ್ಮಹಾರಾಜರವರ ಸುವರ್ಣ ಮಹೋತ್ಸವದ ಮಂಗಲಸಮಾರಂಭದಲ್ಲಿ ಬಂದು ನನ್ನ ಅಳಿಲು ಸೇವೆ ಸಲ್ಲಿಸಿ ಧನ್ಯನಾಗುವ ಭಾಗ್ಯವು ನನ್ನ ಹಣೆಬರೆಹದಲ್ಲಿ ಇಲ್ಲದುದಕ್ಕೆ ಇನ್ನೂ ಹೆಚ್ಚು ಕಳವಳವಾಗಿದೆ. ಆಗಲಿ. ಕಳೆದ ಮೂರು ದಿನದ ಅಖಂಡ ಅನುಷ್ಠಾನದಿಂದ ಮನಸ್ಸು ಸ್ವಲ್ಪ ಹದಕ್ಕೆ ಬಂದಂತಾಗಿದೆ. ಬಾರಯ್ಯ,

ಜಾಂಬುವಂತ; ಅನಾಯಾಸವಾಗಿ ಬಂದ ಅತಿಥಿ ನೀನು. ನನ್ನ ಅನುಷ್ಠಾನದ ಪೂರ್ತಿಗಾಗಿ ಪೂಜ್ಯರನ್ನು ಕರೆದು ಸತ್ಕರಿಸುವವನಿದ್ದೆ. 'ಅತಿಥಿದೇವೋ ಭವ' ಎಂದು ನಮ್ಮ ಪೂರ್ವಜರಾದ ಮಹರ್ಷಿಗಳು ಹೇಳಿದ್ದಾರೆ. ಅದರಂತೆ ನಡೆದುಕೊಳ್ಳದಿರುವುದರಿಂದಲೇ ಜನಗಳಿಗೆಲ್ಲ ಈ ಹೊತ್ತು ಬಂದಿದೆ. ಬಾ, ದಾರಿಯ ದಣಿವಿನಿಂದ ಬಳಲಿರುವೆ. ಮೊದಲು ನಾನು ನಿನ್ನನ್ನು ಸತ್ಕರಿಸುವೆ. ಆತಿಥ್ಯವನ್ನು ಸ್ವೀಕರಿಸಿ, ಸ್ವಲ್ಪ ವಿಶ್ರಮಿಸು. ಮಹಾಸನ್ನಿಧಾನದ ದರ್ಶನಕ್ಕಾಗಿ ನಾನೂ ತವಕ ಗೊಂಡಿದ್ದೇನೆ. ಇಬ್ಬರೂ ಕೂಡಿಯೆ ಹೊರಡುವಾ."

'ಅಯ್ಯೋ ಕರಟಕರಾಯ' ಇಡೀ ದಾರಿ ಓಡಿಓಡಿ ದಣಿದುದ ರಿಂದ ಜಾಂಬುವಂತನು ಉಸಿರೆಳೆಯುತ್ತ, ತೇಕುತ್ತ, ಮಾತನಾಡಿದ. 'ಮಹಾಸ್ವಾಮಿಯವರು ನಿಂತ ಕಾಲ ಮೇಲೆಯೆ ನಿನ್ನನ್ನು ಕರೆತರಲು ಆಜ್ಞಾಪಿಸಿದ್ದಾರೆ. ಆದುದರಿಂದ ಇನ್ನು ನಿಲ್ಲಲು ಅವಕಾಶವಿಲ್ಲ. ಈಗಲೆ ಹೋಗೋಣ ನಡೆ' ಎಂದನು.

'ಅಜ್ಜಯ್ಯ, ನನಗೆ ಇನ್ನೂ ನಡುಹರೆ, ನಾನು ಹೇಗೂ ನಡೆಯ ಬಹುದು. ಆದರೆ ನಿನ್ನ ವಯಸ್ಸೇನು? ಈಗಲೆ ಉಬ್ಬಸ ಬಡುತ್ತಿರುವ ನಿನ್ನಿಂದ ಮತ್ತೆ ಇಷ್ಟು ದೂರ ನಡೆಯಲು ಆದೀತೆ? ಅಲ್ಲದೆ ಇದೀಗ ಬೆಳಗಾಗ ಬಂದಿದೆ. ಈಗ ಹೊರಟು ಸಂಕಟದಲ್ಲಿ ಸಿಕ್ಕಿಬೀಳುವ ಎಗ್ಗ ತನ ಬೇಡ. ಅಜ್ಜಯ್ಯ, ನಮ್ಮ ಮನೆಗೆ ಎಂದೂ ತಾನಾಗಿ ಬಂದವನಲ್ಲ. ಈಗ ಬಂದಾಗ ನಿನ್ನನ್ನು ಒಪ್ಪೊತ್ತೂ ಇಟ್ಟುಕೊಳ್ಳದೆ ಕಳಿಸಲಿಕ್ಕಾದೀತೆ? ನೀನಿಂದು ಇಲ್ಲಿ ತಂಗಲೇ ಬೇಕು. ಅಹಾ! ಇದೀಗ ನಿನ್ನನ್ನು ಬಗೆ ಬಗೆಯ ಮಾಂಸದ ಪಕ್ವಾನ್ನಗಳಿಂದ ಉಪಚರಿಸುವುದು ನನ್ನ ಕರ್ತ ವ್ಯವು. ಆದರೆ ಏನು ಮಾಡಲಿ! ಸನ್ಯಾಸವನ್ನು ಸ್ವೀಕರಿಸಿದಂದಿನಿಂದ

ಶಾಕಾಹಾರಿಯಾಗಿದ್ದೇನೆ. ಕ್ಷಮಿಸು, ಮನೆಯಲ್ಲಿ ಜೇನು ಸ್ವಲ್ಪ ಇದ್ದರೆ ಇರಬಹುದು. ನೋಡುತ್ತೇನೆ."

"ಆಂ! ಜೇನೊ?" ನಾಲಿಗೆಯಿಂದ ತುಟಿಗಳನ್ನು ಸವರುತ್ತ ಕರಡೆಪ್ಪನೆಂದ. "ಓ! ಜೇನೊ—ಊ—ಊ—! ಜೇನು ಎಂದರೆ ನನಗೆ ಜೀವ. ಭೂಲೋಕದ ಅಮೃತವೆಂದರೆ ಜೇನು. ಅದೊಂದಿದ್ದರೆ ಉಳಿದುದೇನೂ ನನಗೆ ಬೇಡ." ಎಂದು ಉಬ್ಬಿನಿಂದ ಮೈಮರೆತು ಮಾತನಾಡಿ ಈವರೆಗೆ ಹೊಸತಿಲಲ್ಲಿ ನಿಂತಿದ್ದ ಜಾಂಬುವಂತನು, ಮೃಗೇಂದ್ರನು ಕೊಟ್ಟ ಎಚ್ಚರಿಕೆಯು ನೆನಪುಹಾರಿ ಗವಿಯೊಳಕ್ಕೆ ಹೊರಟನು.

"ತಡೆ ಹಾಗಾದರೆ" ಕರಟಕನೆಂದನು; "ನಿನಗೆ ಜೇನಿನ ಮೇಲೆ ಇಷ್ಟು ಜೀವವಿದ್ದರೆ, ನನ್ನ ಶಿಷ್ಯರೊಬ್ಬರಲ್ಲಿ ನಾಲ್ಕೈದು ಪ್ರಕಾರದ ಜೇನಿನ ಹಲವು ಹುಟ್ಟುಗಳಿವೆ, ನೀನು ಬೇಕಾದಷ್ಟು ತಿಂದು ತೇಗಬಹುದು; ಬಾ, ಅಜ್ಜಯ್ಯ, ಅತ್ತ ಕಡೆಗೆ ಹೊರಡುವ."

ಇಬ್ಬರೂ ತುರುತುರು ನಡೆಗೆಯಿಂದ ಹೊರಟರು. ಸ್ವಲ್ಪ ದೂರ ಹೋಗುವಷ್ಟರಲ್ಲಿ ಅಲ್ಲಿ ಮರದ ಒಂದು ದೊಡ್ಡ ತುಂಡು ಬಿದ್ದಿತ್ತು. ಅದನ್ನು ಅರ್ಧಮರ್ಧ ಕೊಯ್ದು ಅದರಲ್ಲಿ ಚೆನ್ನಾಗಿ ಎರಡು ಬೆಣೆ ಹೊಡೆದಿದ್ದರು. ಆ ಸ್ಥಿತಿಯಲ್ಲಿ ಅದು ಬಹಳ ದಿನಗಳಿಂದ ಬಿದ್ದುಕೊಂಡಿದ್ದು ಅದರ ನಡುವಣ ಟೊಳ್ಳಿನಲ್ಲಿ ಒಂದು ಜೇನು ಇತ್ತು.

'ಇಕೋ, ಅಜ್ಜಯ್ಯ, ಇಲ್ಲಿ ಒಂದು ಜೇನಿದೆ. ಇದನ್ನು ಮೊದಲು ಸ್ವಲ್ಪ ಸವಿ; ಆಮೇಲೆ ಉಳಿದುವುಗಳನ್ನು ತೋರಿಸುತ್ತೇನೆ' ಎಂದು ನರಿಯಣ್ಣನು ಉಸಿರುವುದೊಂದೇ ತಡ; ಕೂಡಲೆ ಆ ಜೇನಿನ ಆಸೆಗೆ ಜಾಂಬುವಂತನು ಕೊರಕಲ ಇಕ್ಕಟ್ಟಿನಲ್ಲಿ ತನ್ನ ಮೂತಿಯನ್ನು ಬಲವಂತವಾಗಿ ತುರುಕಿದನು. ಬೆಣೆಗಳು ಪಟ್ಟನೆ ಕಳಚಿ ಬಿದ್ದುವು. ಕರಡೆಪ್ಪನ ಕರ್—ಗರ್ ಎಂಬ ಗರ್ಜನೆಗೆ ಮೊದಲಾಯ್ತು.

"ಹೇಗಿದೆ, ಜೇನ ಸವಿ ? " ನರಿಯಣ್ಣನೆಂದ; "ಮೃಗೇಂದ್ರನಿಂದ ರಾಯಭಾರಿಯಾಗಿ ಬಂದ ನೀನು ಹೀಗೆ ಲೋಭಕ್ಕೆ ಒಳಗಾಗಬೇಕೆ ? " ಎಂದು ಮತ್ತೆ ಒಳ್ಳೆ ಉಪದೇಶದ ಮಾತುಗಳನ್ನೇ ಆಡಿದನು.

ಇತ್ತ ಕಿರಿಚಾಟಕ್ಕೆ ಕೊನೆಯೆ ಇಲ್ಲದಾಯ್ತು. ಅಲ್ಲಿಯ ಹತ್ತಿರದ ತೋಟಿಗರು ಈ ಗರ್ಜನೆಯನ್ನು ಕೇಳಿ ಕೋಲು ಗುದಿಗೆಗಳನ್ನು ತಕ್ಕೊಂಡು ಓಡಿಬಂದರು. "ಬಿದ್ದು, ಪೆಟ್ಟು ತಿಂದುದಕ್ಕಾಗಿ ಇನ್ನೊಂದು ಬರೆಯನ್ನೂ ಎಳೆಯುವಂತೆ, ಈ ಜನಗಳು ಇನ್ನೂ ಚೆನ್ನಾಗಿ ನನ್ನ ಮೈ ಮೆತ್ತಗೆ ಮಾಡುವಂತೆ ತೋರುತ್ತದೆ! ಆಗಲಿ, ಈ ಕುತ್ತದೊಳಗಿಂದ ಹೇಗೂ ನುಸುಳಿಕೊಂಡು ಪಾರಾಗಲೇ ಬೇಕು, " ಎಂದು ನಿರ್ಧರಿಸಿದ್ದೇ, ಇದ್ದ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಕಿತ್ತುಕೊಂಡು ಓಡಿತು; ಓಡಿಯೇ ಓಡಿತು. 'ಅರಸನಿಗೆ ಇನ್ನಾವ ಮೋರೆ ತೋರಲಿ? ' ಎಂದು ಮಿಡುಕಿತು. ಕೊನೆಗೊಮ್ಮೆ ಮತ್ತೆ ಮೃಗೇಂದ್ರನ ಗವಿಯ ಎದುರು, "ಉಸ್ಸ್ ಅಪ್ಪಾ ! " ಎಂದು ಬಂದು ಬಿದ್ದುಕೊಂಡಿತು.

ಸಿಂಹರಾಜನು ತನ್ನ ರಾಯಭಾರಿಯ ಅವಸ್ಥೆಯನ್ನು ಕಂಡು ಕನಿಕರಗೊಂಡನು. 'ಕರಟಕನು ಎಲ್ಲರನ್ನೂ ಮೀರಿ ನಿಂತನಲ್ಲ; ಇನ್ನೇನು ಗತಿ ? ' ಎಂದು ಸ್ವಲ್ಪ ಚಿಂತೆಗೆ ಒಳಗಾದನು. ತನ್ನ ಕೈಕೆಳಗಿನವನು ತನಗೆ ಮಾಡಿದ ಅವಜ್ಞೆಯನ್ನೂ, ತನ್ನ ಪ್ರಜೆಗಳಿಗೆ ನಡಿಸಿದ ಗೋಳಾಟವನ್ನೂ ನೆನೆದು ಕಿಡಿಕಿಡಿಯಾದನು. ಕಿಡಿಕಿಡಿಯಾದವನೇ ಗುಡುಗುಡು ಗುಡುಗಿದನು. ಗುಡುಗಿ, 'ಕರಟಕನಿಗೆ ಚೆನ್ನಾಗಿ ಬಿಸಿಹಚ್ಚದೆ ಬಿಡುವುದಿಲ್ಲ'ವೆಂದು ಪಣತೊಟ್ಟನು.

---

## ಕೈವಾಡ ೩

ಮೃಗೇಂದ್ರನಿಗೆ ಒಂದು ತೊಡಕು: ಮೂರು ಬಾರಿಯಾದರೂ ಕರೆಕಳುಹಿ, ನ್ಯಾಯಾಸ್ಥಾನದಲ್ಲಿ ಬಂದು ಅವರಿಗೆ ತಮ್ಮ ಪಕ್ಷವನ್ನು ಮಂಡಿಸಲು ಅವಕಾಶವನ್ನು ಕೊಡದೆ ಯಾರನ್ನೂ ಒಮ್ಮೆಲೆ ಅಪರಾಧಿಯೆಂದು ನಿರ್ಧರಿಸಕೂಡದು, ಎಂದು ಈವರೆಗೆ ತಲೆತಲಾಂತರದಿಂದ ನಡೆದುಬಂದ ಒಂದು ಸಂಪ್ರದಾಯ. ಕರಟಕನಿಗೆ ಇದೀಗ ಒಂದು ಸಾರೆ ಮಾತ್ರ ಹೇಳಿ ಕಳುಹಿದ್ದಾಯ್ತು. ಇನ್ನು ಎರಡು ಸಲ ಆತನಿಗೆ ಎಚ್ಚರಿಸಬೇಕೆ? ಅಥವಾ ಈಗಲೇ ಕರಟಕನು ಅಪರಾಧಿಯೆಂದು ಗೊತ್ತುಮಾಡಿ ಶಿಕ್ಷೆವಿಧಿಸಬೇಕೆ?

ಪೂರ್ವ ಪರಂಪರೆಯನ್ನು ಒಮ್ಮೆಲೆ ಮುರಿಯುವುದು ಸರಿಯಲ್ಲ; ಅರಸನೇ ಸಮಾಜದ ಕಟ್ಟು ಕಟ್ಟಳೆಗಳನ್ನು ಮನ್ನಿಸದಿದ್ದರೆ, ಉಳಿದವರು ಎಷ್ಟು ಅನಿರ್ಬಂಧವಾಗಿ ನಡೆಯಬೇಡ? ಆದುದರಿಂದ ಏನೇ ಆಗಲಿ, ತಾನು ಕರಟಕನಿಗೆ ಮತ್ತೆ ಕರೆಕಳುಹದೇ ಗತಿಯಿಲ್ಲವೆಂದು ಮೃಗೇಂದ್ರನಿಗೆ ಕಂಡುಬಂದಿತು. ಆದರೆ ರಾಯಭಾರದ ಹೊಣೆಯನ್ನು ಹೊರಲು ಯಾರೂ ಮುಂದೆ ಬರಲೊಲ್ಲರು. ಜಾಂಬುವಂತನಂತಹ ಅನುಭವಿಕರ ಪಾಡೆ ಹೀಗಾದ ಬಳಿಕ, ತಮಗೆ ಈ ನರಿಯಣ್ಣನು ಮಣಿಯಬಹುದೆ? ಬಾವಿಯ ತೋಡ ಹೋಗಿ ಬೇತಾಳನ ಕೈಗೆ ಸಿಕ್ಕುಬೀಳುವುದು ಬೇಡ, ಎಂದು ಚಿಂತಿಸಿ, ಎಲ್ಲರೂ ಹಿಂಜರಿಯುವವರೇ. ಕೊನೆಗೆ ಸಿಂಹರಾಜನು, ತನ್ನ ಮನೆತದದ ದೂರಿನ ಸಂಬಂಧಿಯಾದ ಕಾಮಿಗೆ ಬೆಸಗೊಂಡನು. "ಅರಸನು ಲೋಕಹಿತಾರ್ಥವಾಗಿ ಪ್ರಜೆಗಳಿಗೆ ಬೆಸಕ್ಕೈದುದನ್ನು ಅವರು

ಮಾಡುವುದು ಕರ್ತವ್ಯವೇ ಆಗಿದೆ; ಮೃಗೇಂದ್ರನ ಬಳಗದವರಲ್ಲಿ ಸೇರಿ ತನ್ನನ್ನು ಎಣಿಸುವರು. ಆದುದರಿಂದ ಅರಸನ ಅಪ್ಪಣೆಗೆ ತಲೆವಾಗಿ, ಆತನ ಪ್ರಸನ್ನತೆಯನ್ನು ಪಡೆಯುವ ಈ ಸಂಧಿಯನ್ನಾದರೂ ಏಕೆ ವ್ಯರ್ಥವಾಗಿ ಹೋಗಗೊಡಬೇಕು ? " ಎಂದು ಸ್ವಾರ್ಥ–ಪರಾರ್ಥಗಳೆರಡು ದೃಷ್ಟಿಯಿಂದಲೂ ವಿಚಾರಿಸಿ ಕಾಮಿಯು ಕರಟಕನನ್ನು ಕರೆತರಲು ಒಪ್ಪಿದಳು.

ಅರಸನು ಕಾಮಿಗೆ, ಮೈಮರೆತು ಅಲ್ಲಿ ನಡೆದುಕೊಳ್ಳದಿರಲು ಎಚ್ಚರಿಸಿದನು. ಗತ್ತುಗಾರಿಕೆ, ಮುಂಕುಹಂಚಿಕೆಗಳಲ್ಲಿ ಕರಟಕನ ಕೈಹಿಡಿದವರೇ ಇಲ್ಲ. ಕಾರಣ ಬಲು ಜೋಕೆ ಎಂದು ಉಪದೇಶಿಸಿದನು.

'ಆಃ, ನಾನೆಲ್ಲ ಬಲ್ಲೆ' ಕಾಮಿಯೆಂದಳು. 'ಜಾಂಬುವಂತನಂತೆ ನಾನೇನು ಮುದಿಗೊಡ್ಡೆ ? ನಾನೇನು ಅರಪತ್ತರ ಅರೆಮರವಿನವಳೆ ? ಕರಡೆಯಂತೆ ಸೊಣಗಗಳ ಎಂಜಲಕ್ಕೆ ನಾಲಿಗೆ ಚಾಚುವವಳು ನಾನಲ್ಲ. ಮೊಸಲಿನ ಕೆನೆವಾಲು ಹೊಸಬೆಣ್ಣೆಗಳಿಂದ ಬೆಳೆದ ಮಿದುಳು ನನ್ನದು. ಯಾರಿಗೆ ಯಾರು ಸಾಟಿ ?' ಎಂದು ಗೊಂಡೆಯ ಬಾಲವನ್ನೆತ್ತರಿಸಿ ಉಬ್ಬಿನಿಂದ ಮೂಗು ಮೇಲೆ ಮಾಡಿಕೊಂಡು ಹೊರಟಿತು.

ನಂಜೆಯಾಗುತ್ತ ಬಂದಿತ್ತು. ನರಿಯಣ್ಣನು ತನ್ನ ಗವಿಯ ಹೊರವಲಯದ ವನದಲ್ಲಿ ಬೈಗಿನ ಹೂಬಿಸಿಲಿನ ಸೊಬಗನ್ನು ಅನುಭವಿಸುತ್ತ ಕುಳಿತಿದ್ದನು. ಕಾಮಿಯು ಒನಪು ಒಯ್ಯಾರಗಳನ್ನು ತೋರುತ್ತ, ಮುರುಕ ಮಾಡುತ್ತ, ಮ್ಯಾಯಾಂವ್ ಎಂದು, ನರಿಯಣ್ಣನಲ್ಲಿಗೆ ಒಳ್ಳೆ ನಯದಿಂದ ಬಂದು ನೆಲಮುಟ್ಟಿ ನಮಸ್ಕರಿಸಿತು.

'ಆಜನ್ಮ–ಸಾವಿತ್ರಿಯಾಗಿ ಬಾಳು; ತಂಗಿ, ಬಾ' ಎಂದು ಹರಸುತ್ತ ನರಿಯಣ್ಣನು ಕಾಮಿಯನ್ನು ಸ್ವಾಗತಿಸಿದನು. 'ತಂಗಿ, ಇದೇನು ? ಅಡ್ಡವೇಳೆಯಲ್ಲಿ ಆಕಸ್ಮಿಕವಾಗಿ ಬಂದುಬಿಟ್ಟೆ ? ರಾಜನ

ಪತ್ರ-ಲೇಖಿ ನೀನು. ನಿನಗೆ ಹೇಗೆ ಬಿಡುವು ದೊರೆತಿತು? ಆಯ್ತು; ನಿನ್ನನ್ನು ಕಾಣದೆ ತುಂಬ ದಿನಗಳಾದುವು. ಇಂದು ಬೆಟ್ಟಿಯಾಯ್ತು; ಇದೂ ಒಂದು ಸಂತೋಷವೇ. ಇನ್ನು ನಾಲ್ಕು ದಿನ ಸ್ವಸ್ಥವಾಗಿ ನಿಂತು ಒಂದೇ ಬಗೆಯ ಬಾಳಿನ ಬೇಸರವನ್ನು ಸ್ವಲ್ಪವಾದರೂ ಕಳೆದುಕೋ; ಬಾ. ಇಲ್ಲಿ ವಿಶ್ರಮಿಸು."

"ನರಿಯಣ್ಣ, ಮೃಗೇಂದ್ರನ ರಾಯಸವನ್ನೊಂದು ನಿನಗೆ ತಂದಿದ್ದೇನೆ. ಇಕೋ ಈ ಓಲೆಯನ್ನು." ಕಾಮಿಯು ಒರೆದಿತು. "ನಿನ್ನ ಕೈವಾಡದಿಂದ ತಮಗೆ ವಿಪರೀತ ಗೋಳಾಟವಾಗಿದೆಯೆಂದು ಹಲವರು ಬಂದು ಅರಸನಲ್ಲಿ ಮೊರೆಯಿಟ್ಟಿದ್ದಾರೆ. ಆದರೆ ಅವರ ಆ ದೂರುಗಳನ್ನು ಕುರಿತು ನಿನ್ನ ಹೇಳಿಕೆಯನ್ನು ಕೇಳಿಕೊಳ್ಳಲು ಸಿಂಹ ರಾಯನು ನಿನ್ನನ್ನು ಕರೆಕಳುಹಿದ್ದಾನೆ. ನಡೆ; ಈಗಲೆ ಹೊರಡುವಾ."

"ದೂರುಗಳು! ನನ್ನ ವಿರುದ್ಧ!" ತೀರ ಸೋಜಿಗಗೊಂಡವ ನಂತೆ ನರಿಯಣ್ಣನು ನುಡಿದನು. "ಸಿಂಹರಾಯನು ನನ್ನನ್ನು ಮಂತ್ರಿ ಪದದಿಂದ ತಳ್ಳಬೇಕೆಂದು, ಉಳಿದ ಪಶುಗಳೆಲ್ಲ ನನ್ನ ವಿರುದ್ಧ ಒಳ ಸಂಚುಮಾಡಿ ಅರಸನ ಕಿವಿ ಊದಿದಂತೆ ತೋರುತ್ತದೆ. ಆಗಲಿ, ನನ್ನ ಮೇಲಣ ಆರೋಪಗಳು ಹುರುಳಿಲ್ಲದುವೂ, ಸೇಡು ತೀರಿಸಿಕೊಳ್ಳಲು ದ್ವೇಷದಿಂದ ಹುಟ್ಟಿಸಿದುವೂ ಆಗಿವೆಯೆಂದು ನಾನು ಸಿದ್ಧಪಡಿಸಲೇ ಬೇಕು. ಏಕೆಂದರೆ ಸಜ್ಜನರಿಗೆ ಮಾನಹೋದರೆ ಮರಣ ಬಂದ ಹಾಗೆ. ಅರಸನಲ್ಲಿಗೆ ನಾನು ಬರಲೇಬೇಕು. ಆದರೆ ನನ್ನ ಮಗು ಬೇನೆಯಿಂದ ಹಾಸುಗೆಯಲ್ಲಿ ಒರಲುತ್ತ ಬಿದ್ದುಕೊಂಡಿದೆ. ಇದಕ್ಕೆಲ್ಲ ಮದ್ದು ಹುಡುಕಿ ಕೊಂಡು ಹೋಗಲು ನಾನಿಲ್ಲಿ ಬಂದಿದ್ದೆ. ಇದೀಗ ಈ ಬೇರು ಈ ಸೊಪ್ಪು ತಕ್ಕೊಂಡು ಮನೆಗೇ ಹೊರಟಿದ್ದೆ. ಅಷ್ಟರಲ್ಲಿ ನಿನ್ನ ದರ್ಶನ ವಾಯ್ತು. ತಂಗಿ, ಈ ಔಷಧೋಪಚಾರದಿಂದ ಸ್ವಲ್ಪ ಗುಣವೆನಿಸಿ

ದೊಡನೆ, ನಾಳೆ ಬೇಗನೆ ಹೊರಡುವಾ. ದಯವಿಟ್ಟು ಸ್ವಲ್ಪ ತಡೆಯುವೆಯಾ ? ”

ಮಕ್ಕಳ ಸಂಕಷ್ಟದ ಮಾತು ಕೇಳಿ, ಕಾಮಿಯ ಕರುಳು ಕರಗಿತು. ಒಮ್ಮೆಲೆ ಹೊರಡಬೇಕೆಂದು ಒತ್ತಾಯ ಪಡಿಸುವಷ್ಟು ಕಲ್ಲೆದೆ ತನಗಿಲ್ಲವೆಂದು ಅದಕ್ಕೆ ಕಂಡುಬಂದಿತು. ಆದರೂ ಅರಸನ ಅಪ್ಪಣೆಯನ್ನು ಮೀರುವುದು ಹೇಗೆ, ಎಂದು ಇನ್ನೊಂದು ವಿಚಾರವೂ ಬಾಧಿಸತೊಡಗಿತು. ಈ ಧರ್ಮಸಂಕಟದಲ್ಲಿ ಅದರ ಮನಸು ಹೊಯ್ದಾಡುತ್ತಿರುವಾಗ ಕರಟಕನು ಮಾತು ಮುಂದುವರಿಸಿದನು.

“ ತಂಗೀ, ನಿನಗೆ ಸೇರುವುದಾದರೆ ಥಳಿಸದ ಅಕ್ಕಿಯ ಅನ್ನ, ಕಾಸದ ತುಪ್ಪ ನೀಡಿ, ಅಪರೂಪದ ಹಬ್ಬದೂಟ ಮಾಡಿಸುವೆ; ಒಪ್ಪಿಗೆಯೆ ? ” ಎಂದನು.

“ಅಣ್ಣ, ಏನೋ ಮಾತಿನಲ್ಲಿ ಒಡಪಿನ ಅಂದವಿದೆ; ನಿನ್ನ ಹದನವಾದ ಬುದ್ಧಿಗೆ ಮೆಚ್ಚಬೇಕೋ, ಹೆದರಬೇಕೋ ಇದೇ ತಿಳಿಯದು. ” ಕಾಮಿ ಎಂದಿತು. “ ತವುಡಿನಲ್ಲಿ ಬಹಳ ಸತ್ವವುಂಟೆಂದು ಆಧುನಿಕ ಶಾಸ್ತ್ರಜ್ಞರು ಕಂಡುಹಿಡಿದಿರುವರಂತೆ. ಅದಕ್ಕಾಗಿ ನನಗೆ ಥಳಿಸದ ಅಕ್ಕಿಯ ಪಕ್ವಾನ್ನವೊ? ಹಾಗಾದರೆ ಕಾಸದ ತುಪ್ಪವೆಂಬುದನ್ನು ಮಾತ್ರ ನಾನೆಂದೂ ಕಂಡಿಲ್ಲ; ಕೇಳಿಲ್ಲ. ಅದೆಂತಹ ತುಪ್ಪವಪ್ಪ? ನಾನು ಸವಿಯದ ತುಪ್ಪದ ಜಾತಿಯು ಲೋಕದಲ್ಲುಂಟೆ ? ” ಎಂದು ಸೋಜಿಗಗೊಂಡು ಸಂದೇಹದ ದೃಷ್ಟಿಯಿಂದ ಕರಟಕನನ್ನು ನಿರೀಕ್ಷಿಸಿತು.

ಹುಸಿನಗೆಯನ್ನು ಹೊರಸೂಸಿ, ನರಿಯು ಉಸಿರಿತು. “ತಂಗೀ, ಥಳಿಸದ ಅಕ್ಕಿ ಎಂದರೆ, ಏಲಕ್ಕಿ; ಕಾಸದ ತುಪ್ಪವೆಂದರೆ ಜೇನು. ನಿನಗೆ ಇವು ಇಷ್ಟವೆ? ”

ನರಿಯ ಈ ಮಾತುಗಳಿಂದ ಕಾಮಿಗೆ ಒಮ್ಮೆಲೆ ಬಡೆದು ಎಚ್ಚರಿಸಿದಂತಾಯಿತು. ಕೂಡಲೆ ಅದು ನರಿಗೆ ಒಡಮಡಿದಿತು:

"ಜೇನಿನ ಸವಿಯನ್ನು ಜಾಂಬುವಂತನು ಉಂಡಷ್ಟು ಸಾಕಾಗಿದೆ. ದಯೆಯಿಟ್ಟು ನನಗೆ ಆ ಬಗೆಯಾಗಿ ಜೆಳ್ಳುಹಣ್ಣು ತಿನ್ನಿಸುವುದು ಬೇಡ. ನಾನು ಅಬಲೆ, ನಾನಿನ್ನು ಇಲ್ಲಿ ನಿಲ್ಲಲಾರೆ. ಅರಸನ ಅಪ್ಪಣೆಯಾಗಿದೆ. ಒಡನೆಯೇ ಹೊರಟುಬಿಡುವ; ಬೇಗನೆ ಸಿದ್ಧತೆ ಮಾಡು."

ಕರಟಕನು ಒಮ್ಮೆಲೇ ಮಾತಿನ ರೀತಿಯನ್ನು ಬದಲಿಸಿ ನುಡಿದನು. "ಹಾಗಲ್ಲ, ತಂಗೀ; ಜಾಂಬುವಂತನು ಜೇನಿನ ವಿಚಾರದಲ್ಲಿ ನಿಮಗೇನೋ ಸುಳ್ಳುಸುದ್ದಿ ಹೇಳಿದ ಹಾಗೆ ತೋರುತ್ತದೆ. ಹೆರವರ ಹಿತ್ತಲಲ್ಲಿ ಹೋಗಬೇಡವೆಂದು ಆತನಿಗೆ ಪರಿಪರಿಯಾಗಿ ಬಿನ್ನವಿಸಿದೆ. 'ಜೇನು ಇದೆ; ಅಲ್ಲಿ ತಾನು ಹೊಕ್ಕು ತಿಂದು ಬರತಕ್ಕವನೆ' ಎಂದು ಬೇಲೀ ಜಿಗಿದು ಒಳಗೆ ಹೋದನು. ನಡೆ, ಇಲ್ಲಿಯೇ ಹತ್ತಿರವಿದೆ; ಆ ಸ್ಥಳ. ತೋರಿಸುತ್ತೇನೆ."

ಇಬ್ಬರೂ ಹಲವು ದಿನಗಳ ತರುವಾಯ ಬೆಟ್ಟಿಯಾದ ಅಣ್ಣ–ತಂಗಿಯರಂತೆ ಬಹಳ ಸವಿನವಿಯಾಗಿ ಅಕ್ಕರದ ಮಾತುಗಳನ್ನಾಡುತ್ತ ಹೊರಟರು. ಕಿರಿದು ದೂರ ಹೋಗುವಷ್ಟರಲ್ಲಿ ದೊಡ್ಡ ಮಣ್ಣಮನೆಯ ಅಂಗಳವು ಕಣ್ಣಿಗೆ ಬಿದ್ದಿತು. ಅದನ್ನು ತೋರಿಸುತ್ತ ನರಿಯು ಎಂದಿತು. "ಇದು ಒಕ್ಕಲರ ಒಂದು ಕುಟುಂಬದ ಬಿಡಾರವು. ಈ ಮನೆಯ ಯಜಮಾನನು ಒಬ್ಬ ಒಳ್ಳೆಯ ರೈತನು. ಮನೆಯಲ್ಲಿ ಹತ್ತೆಂಟು ಚೀಲ ಗೋದಿ ಜೋಳ ಮುಂತಾದುವನ್ನು ಯಾವಾಗಲೂ ಸಂಗ್ರಹಿಸಿರುತ್ತಾನೆ. ಈತನ ಮನೆಯೆಂದರೆ ಇಲಿಗಳ ತವರುಮನೆ."

"ಆಂ! ಇಲ್ಲಿ ಇಲಿಗಳ ಆಗರವೆ?" ಕಾಮಿಯು ಫಕ್ಕನೆ ನಡುವೇ ಕೇಳಿತು.

" ಅಹುದು. ಇರುಳಿನಲ್ಲಿ ಇಲ್ಲಿ ಇಲಿಗಳ ಸಂತೆಯೇ ನೆರೆಯುತ್ತದೆ. ನಿನ್ನಂತಹ ಪರೋಪಕಾರಿಗಳು ಈ ಲೋಕದಲ್ಲಿ ಇಲ್ಲದೆ ಇದ್ದರೆ ರೈತರು ಆಳಾಗುತ್ತಿದ್ದಿಲ್ಲ. ರೈತರು ಚೆನ್ನಾಗಿ ಬದುಕಿರದಿದ್ದರೆ ಲೋಕಕ್ಕೆಲ್ಲ ಉಪವಾಸದ ಹೊರತು ಬೇರೆ ಗತಿಯೇ ಉಳಿಯುತ್ತಿದ್ದಿಲ್ಲ. "

" ನೀನು ಎಂತಹ ಬುದ್ಧಿವಂತನೊ, ಅಣ್ಣ ! ನಾನು ನಿಜವಾಗಿ ನಿನ್ನ ಬೆನ್ನಲಿ ಬಂದ ತಂಗಿಯಾಗಿದ್ದರೆ ! "

" ತಂಗೀ, ನನಗೆ ಮುಖಸ್ತುತಿ ಎಳ್ಳನಿತೂ ಸೇರುವುದಿಲ್ಲ. ಅದು ಅಂತಿರಲಿ. ಇದೀಗ ಈ ರೈತನಿಗೆ ಉಪಕಾರ ಮಾಡುವ ಒಂದು ಬಂಗಾರದಂತಹ ಹೊತ್ತು ಬಂದಿದೆ. ಇಲಿಗಳ ಕಾಟದಿಂದ ಈತನನ್ನು ಉಳಿಸಿ ಲೋಕಕ್ಕೂ ಇನ್ನೊಂದು ರೀತಿಯಿಂದ ನೆರವಾಗಲು ಸಾಧ್ಯವಿದ್ದರೆ ನೋಡು. "

ಕಾಮಿಯು ಮೆಲ್ಲಮೆಲ್ಲನೆ ತನ್ನ ಅಳವಿನಲ್ಲಿ ಬರುತ್ತಿದ್ದುದನ್ನು ಕಂಡು ಒಳಗೊಳಗೇ ಹಿಗ್ಗುತ್ತಿದ್ದರೂ ಕರಟಕನು ಬೆಕ್ಕನ್ನು ಇನ್ನಿಷ್ಟು ಪರೀಕ್ಷಿಸುವುದಕ್ಕಾಗಿ ತಾನು ಸ್ವಲ್ಪ ಮೌನತಾಳಿ ಗಂಭೀರ ವೃತ್ತಿಯವನಾದನು.

" ಹಾಗಾದರೆ, " ಕಾಮಿ ಎಂದಿತು. " ಅಣ್ಣಾ ನಿನ್ನ ಅಭಿಪ್ರಾಯವೇನು ? ನಾನು ಇಲ್ಲಿ ಒಳಕ್ಕೆ ಹೋಗಲೆ ? " ಇಲಿಯ ಸುದ್ದಿಯನ್ನು ಕೇಳಿದಾಗಲೆ ಆ ಮನೆಯಲ್ಲಿ ಸೇರಬೇಕೆಂಬ ಚಪಲವುಂಟಾಗಿದ್ದ ಬೆಕ್ಕು ಹೇಗೋ ತಡೆದುಕೊಂಡು ನರಿಯಣ್ಣನನ್ನು ಕೇಳಿತು.

" ತಂಗಿ, ಹೀಗೆಯೆ ಹೋಗೆಂದು ನಾನು ಹೇಳಿಬಿಡಬಹುದಾಗಿತ್ತು. ಆದರೆ ತೊಡಕಿದೆ. ಈ ಮನೆಯ ಯಜಮಾನನ ಬಾವುಗ ಒಂದಿದೆ. ಆದರೆ ಅದಕ್ಕೆ ಇಲಿಗಳ ಓಕರಿಕೆ ಬಂದಿದೆ. ಆದರೂ ಬೇರೆ ಬೆಕ್ಕಿಗೆ ಬರಗೊಡುವುದಿಲ್ಲ. ಕಾರಣ ನೀನು ಬಹಳ ಎಚ್ಚರದಿಂದ ಒಳಗೆ

ಹೋಗುವುದು ಲೇಸು. ಆ ಬಾವುಗನ ಕಣ್ಣು ತಪ್ಪಿಸಿ ಒಳಸೇರುವುದಕ್ಕೆ, ಇಕೊ, ಇಲ್ಲಿ ಒಂದು ಹೋರಿನೊಳಗಿಂದ ದಾರಿಯಿದೆ. ಇಲಿಗಳು ವಿಶೇಷ ವಾಗಿ ಓಡಾಡುವುದೂ ಇಲ್ಲಿಯೆ. ”

ಕರಟಕನ ಈ ಸೂಚನೆಯು ಸಯುಕ್ತಿಕವೆನಿಸಿ ಕಾಮಿಯು ಆ ಗುದ್ದಿನ ಹೊರಬಾಯಿಂದ ಒಳಹೊಕ್ಕಿತು. ಆದರೆ ಅದರ ಒಳ ಬಾಯಿಗೆ ರೈತನು ಒಂದು ಬಲೆಯನ್ನಿರಿಸಿದ್ದನು. ಮುನ್ನದಿನವೇ ಆ ರೈತನ ಕೋಳಿಗಳನ್ನು ಕದ್ದು, ಕರಟಕನು ಹೋರಿನೊಳಗಿಂದಲೇ ಪಾರಾಗಿ ಹೋಗಿದ್ದನು. ಇಂದು ತಮ್ಮ ಕೋಳಿಗಳನ್ನು ಅಪಹರಿಸಿದ ನರಿಯನ್ನು ಹಿಡಿಯಬೇಕೆಂದು ಒಡ್ಡಿದ ಬಲೆಯಲ್ಲಿ ಬೆಕ್ಕು ಸಿಕ್ಕುಬಿದ್ದಿತು. ಬೆಕ್ಕಿನ ಕೊರಳಿಗೆ ಉರುಲು ಬಿದ್ದು ವಿಲಿವಿಲಿ ಒದ್ದಾಡಿ ಒರಲುವುದಕ್ಕಾ ರಂಭಿಸಿತು.

ಕಾಮಿಯ ಚೀರಾಟಕ್ಕೆ ಮನೆಯವರೆಲ್ಲ ಎಚ್ಚತ್ತರು. ಬಲೆಯಲ್ಲಿ ನರಿಯ ಬದಲು ಬೆಕ್ಕು ಸಿಕ್ಕಿದೆ ಎಂಬುದು ತಿಳಿದು ರೈತನ ಅರ್ಧ ಹುರುಪು ಮಾಯವಾಯ್ತು. ಇದೂ ಒಮ್ಮೊಮ್ಮೆ ತನ್ನ ಕೋಳಿಗಳಿಗೆ ತೊಂದರೆ ಕೊಡುವುದುಂಟು. ಕಾರಣ ಇದಕ್ಕಾದರೂ ಏಕೆ ಬುದ್ಧಿಗಲಿಸ ಬಾರದು? ಎಂಬ ವಿಚಾರದಿಂದ ನರಿಯನ್ನು ಹೊಡೆಯಲು ಇಟ್ಟಿದ್ದ ಗುದಿಗೆಯನ್ನು ಮೇಲಕ್ಕೆತ್ತಿದನು. ಬೆಕ್ಕು ಕೊಂದರೆ ಪಾಪ ಬಂದೀ ತೆಂದು ಹೆದರಿ ರೈತನ ಹೆಂಡತಿಯು ಬಂದು ತಡೆಯದಿದ್ದರೆ ಬೆಕ್ಕಿನ ತಲೆ ಒಡೆಯುವುದೇ. ಬೆಕ್ಕು ಕೊಂದರೆ, ಅಂಗೈಯಲ್ಲಿ ಕೆಂಡ ಹಿಡಿದು ಕೊಂಡು ಕಾಶೀ ಯಾತ್ರೆ ಮಾಡಿದರೂ ಆ ಪಾಪದ ಪರಿಹಾರವಾಗುವು ದಿಲ್ಲವೆಂಬ ಭಾವಿಕ ಕಲ್ಪನೆಯು ಕಾಮಿಯ ಪ್ರಾಣವನ್ನು ಉಳಿಸಿತು.

ಮರುದಿನ ಮೋರೆಯು ಬಾಡಿ ಬತ್ತಿಯಾದ ಕಾಮಿ ಅರಸನ ಓಲಗಕ್ಕೆ ಬಂದಿತು. ಹೊರಡುವಾಗಿನ ಬಿಂಕ, ಬರುವಾಗ ಇದ್ದಿಲ್ಲ.

ಮಾನಿನಿಯ ಮೂಗು ಕೆಳಗಾಗಿತ್ತು. ಬಲೆಯ ಉರುಲಿನ ಬಿಗಿತದಿಂದ ಕತ್ತಿಗಾದ ಗಾಯದಿಂದ ಹೊರಬಂದ ನೆತ್ತರದ ಹನಿಗಳು ಮೈಮೇಲೆ ಅಲ್ಲಿ ಇಲ್ಲಿ ಹತ್ತಿದ್ದುವು. ಬಲೆಯಲ್ಲಿ ಹೊರಳಾಡಿ ತೊಳಲುತ್ತಿದ್ದಾಗ ಮೈಗೆ ಅಡರಿದ ಹುಡಿಯು ಇನ್ನೂ ಹಾಗೆಯೆ ಇತ್ತು. ಅರಚಿ, ಕಿರಚಿ ದನಿ ಬಿದ್ದಿತ್ತು. ಕಣ್ಣಿಂದ ನೀರು ತಟಕುತ್ತಿತ್ತು. ಓಲಗದಲ್ಲಿದ್ದವರೆಲ್ಲ ಬೆಕ್ಕಿನ ಈ ದುರವಸ್ಥೆಯನ್ನು ಕಂಡು ಮಮ್ಮಲನೆ ಮರುಗಿದರು. ಕಾಮಿಯು ಒಳಗೆ ಅಡಿಯಿಟ್ಟದ್ದೇ, ‘ ಅಯ್ಯೋ ಕರಟಕನ ಮೋಸ....’ ಎಂದು ಉಸುರಿ ಗೋಣ ಚೆಲ್ಲಿ ನೆಲಕ್ಕೆ ಬಿದ್ದಿತು.

ಸಂಕಟದಿಂದ ತೊಳಲಿ, ಬಳಲಿ ಮೂರ್ಛೆಗೊಂಡ ಬೆಕ್ಕಿಗೆ ಮೃಗೇಂದ್ರನ ಅಪ್ಪಣೆಯಂತೆ ಆರೈಕೆ ನಡೆಯಿತು. ನೆತ್ತಿಗೆ ತಣ್ಣೀರು ತಳಿದು ಸ್ವಲ್ಪ ಗಾಳಿಹಾಕಿದರು. ಕಾಮಿಯು ಎಚ್ಚತ್ತ ಮೇಲೆ ಸಾವ ಕಾಶವಾಗಿ ತನ್ನ ಕತೆಯನ್ನೆಲ್ಲ ಸಭೆಗೆ ಅರುಹಿತು.

---

## ಕೈವಾಡ ೪



ಮೃಗೇಂದ್ರನಿಗೆ ಇಂದಿನಷ್ಟು ಕೋಪ ಹಿಂದೆ ಎಂದೂ ಬಂದಿರ ಲಿಲ್ಲ. ಸಿಟ್ಟಿನ ಉರಿಯಿಂದ ಕಣ್ಣು ಕೆಂಡದಂತಾಗಿದ್ದುವು. “ ಅಬಲೆ ಯನ್ನೂ ಮೋಸಗೊಳಿಸಲು ಹೇಸಲಿಲ್ಲವಲ್ಲ! ” ಸಿಂಹರಾಯನು ಗರ್ಜಿಸಿ ದನು. “ ಇದು ನಿಜವಿದ್ದರೆ ಆ ವಂಚಕನಿಗೆ ಯಾವ ಶಿಕ್ಷೆ ವಿಧಿಸಿದರೂ

ಕಡಿಮೆಯೇ ಸರಿ; ಎಲಾ, ಗಿಡುಗರಾಯ, ನೀನು ಕರಟಕನಲ್ಲಿ ನಂಬುಗೆ ಯುಳ್ಳ ಆತನ ಗೆಳೆಯನೆಂದು ಕಂಡುಬಂದಿದೆ. ಆದುದರಿಂದ ಇದೀಗ ಆತನನ್ನು ಇಲ್ಲಿಗೆ ಅಟ್ಟಿಕೊಂಡು ಬರಲು ನೀನೇ ಹೋಗುವುದು ಉಚಿತ ವಾಗಿದೆ. ನೀನು ಈ ಮೊದಲು ಹೇಳಿದಂತೆ, ಆತನು ನಿಜವಾಗಿಯೇ ನಿರ್ದೋಷಿಯಾಗಿದ್ದಾದರೆ ನಮ್ಮ ನ್ಯಾಯಾಸ್ಥಾನಕ್ಕೆ ಬರಲು ಅವನು ಮೋರೆ ತಪ್ಪಿಸುವುದೇಕೆ? ಈ ಬಗೆಯ ತಪ್ಪಿಸಾಟದಿಂದ ಆತನಲ್ಲಿ ನಮ್ಮ ಸಂಶಯವು ಇನ್ನೂ ದೃಢವಾಗುತ್ತಲಿದೆ. ನಾನೀಗ ನಿನ್ನನ್ನು ಕಳುಹುವುದು ಕೊನೆಯ ಸಾರಿ. ಇನ್ನು ಮೇಲೆ ಆತನಿಗೆ ಹೆಚ್ಚಿನ ಅವಧಿ ಯನ್ನು ಕೊಡುವುದು ಸಾಧ್ಯವಿಲ್ಲ. ನೋಡು; ನಿನ್ನ ಗೆಳೆಯನ ಮೋರೆಗೆ ಮಸಿಹತ್ತುವ ಹೊತ್ತು ಬಂದಿದೆ. ಅವನು ನಿರಪರಾಧಿಯಾಗಿದ್ದರೆ ಇಲ್ಲಿ ಬಂದು ಹಾಗೆ ಸಿದ್ಧ ಮಾಡಲಿ; ಇಲ್ಲವಾದರೆ ನಮ್ಮ ದಂಡನೆಗೆ ತಲೆ ವಾಗಲಿ. ವಿಮಾನವೇಗದಿಂದ ಹೋಗಿ ಅವನನ್ನು ತಂದು, ನ್ಯಾಯಾ ಸ್ಥಾನದ ಮುಂದೆ ನಿಲ್ಲಿಸು, ನಡೆ ಬೇಗ. ”

ದುರ್ಜನಿಗಳ ಬೆನ್ನ ಕಟ್ಟಿದರೆ ತಮಗೂ ಅದರ ಸೆಕೆ ತಾಗದೆ ಬಿಡುವುದಿಲ್ಲವೆಂಬ ಮಾತು ನಿಜವೆಂದು ಗಿಡುಗನಿಗೆ ಎನಿಸಿತು. ಕರಟ ಕನು ಕೇವಲ ದುಷ್ಟನಲ್ಲ; ದುಷ್ಟರೆಂದು ಹೆಸರಾದವರಲ್ಲಿ ಕೆಲವೊಂದು ಒಳ್ಳೆಯ ಗುಣಗಳೂ ಇಲ್ಲದೆ ಇರುವುದಿಲ್ಲ. ಆದರೆ ಅವುಗಳನ್ನು ಅರಿತು ಕೊಳ್ಳುವಷ್ಟು ತಾಳ್ಮೆ ಲೋಕಕ್ಕಿರುವುದಿಲ್ಲ; ಅಥವಾ ಅಂಶರೂಪದಿಂದ ಇರುವ ಸದ್ಗುಣಗಳ ಮಿಣುಕು ವಿಶೇಷವಾಗಿದ್ದ ದುರ್ಗುಣಗಳ ಕಪ್ಪು ಕಲೆಯಲ್ಲಿ ಅಡಗಿಹೋಗುವುದು. ಆದುದರಿಂದ ಹೀಗಾಗಬಾರದೆಂದು ತಾನು ಕರಟಕನಲ್ಲಿ ಅಲ್ಪಾಂಶದಿಂದ ಇರುವ ಒಂದರ್ಧ ಒಳ್ಳೆಯ ಗುಣ ವನ್ನು ಎತ್ತಿ ಹೇಳಿದುದು ತಪ್ಪೆ? ಈಗ ಆ ಪ್ರಾಣಿಯನ್ನು ಹಿಡಿದು ತರುವ ಭಾರವೂ ತನ್ನ ಮೇಲೆಯೆ ಬೀಳಬೇಕೆ? ಅಯ್ಯೋ ಇದೇನು ನ್ಯಾಯ?

ಎಂದು ಗಿಡುಗನು ಮನದಲ್ಲಿ ಚಿಂತೆಗೆ ಒಳಗಾದನು. ಏಕೆಂದರೆ, ಕರಟಕನು ತನ್ನ ಮಾತನ್ನಾದರೂ ಆಲಿಸಬಹುದೇ? ಎಂಬ ಸಂದೇಹವು ಅದಕ್ಕೆ ಬಾಧಿಸುತ್ತಿತ್ತು. ಆದರೂ ಕರೆಯಲು ಹೊರಡದೆ ಗತಿಯಿದ್ದಿಲ್ಲ. ಹೊರಡದಿದ್ದರೆ ಮೃಗೇಂದ್ರನ ಸಿಟ್ಟಿಗೆ ಪಕ್ಕಾಗಬೇಕಾಗುತ್ತಿತ್ತು.

ಹಾಗೂ ಹೀಗೂ ಗಿಡುಗನೊಮ್ಮೆ ಕರಟಕನಿದ್ದಲ್ಲಿಗೆ ಬಂದನು. ಕರಟಕನು ಮಕ್ಕಳೊಡನೆ ಚಿಣ್ಣಾಟ ನಡಿಸಿದ್ದನು. 'ಹೊರಗಿನ ಜಗತ್ತಿನಲ್ಲಿ ವಂಚಕನೂ ಮಾಟಗಾರನೂ ಎಂದು ಹೆಸರಾದ ಕರಟಕನು ತನ್ನ ಮನೆಯಲ್ಲಿ ಅದೆಷ್ಟು ಒಲವಿನಿಂದ ನಲವಿನಿಂದ ಮಕ್ಕಳೊಡನಾಟ ನಡಿಸಿದ್ದಾನೆ! ಬಾಲಭಾವದವನಾಗಿದ್ದಾನೆ! ಈತನು ಹೀಗೂ ಉಂಟೆಂದು ಹೇಳಿದರೆ ಜನರು ನಂಬುವುದಿಲ್ಲ! ಇದೇ ಲೋಕದ ವಿಚಿತ್ರ ರೀತಿ!' ಎಂದು ಮನದೊಳಗೆ ವಿಚಾರಿಸುತ್ತ ಕರಟಕನ ಎದುರಿನ ದಿಬ್ಬದ ಮೇಲೆ ಗಿಡುಗನು ಕುಳಿತನು.

ಗಿಡುಗನು ತನ್ನ ಪಕ್ಷಪಾತಿಯೆಂದು ನರಿಯಣ್ಣನಿಗೆ ಗೊತ್ತು. ಆದುದರಿಂದ ತುಂಬ ಆದರದಿಂದ 'ಗೆಳೆಯಾ ಇದೇನು ನಿನ್ನ ಆಕಸ್ಮಿಕ ಆಗಮನ?' ಎಂದು ಕೇಳಿದನು.

ಆಗ ಗಿಡುಗನು ಮೃಗೇಂದ್ರನ ಒಡ್ಡೋಲಗದ ಸಂಪೂರ್ಣ ವೃತ್ತಾಂತವನ್ನು ನಿವೇದಿಸಿ, "ನರಿಯಣ್ಣ, ಪ್ರಪಂಚದಲ್ಲಿ ಸುಮ್ಮನೆ ನಿನ್ನ ಅಪಕೀರ್ತಿ ಹಬ್ಬುತ್ತಲಿದೆ. ಅದು ಹರಡುವುದಕ್ಕೆ ಸುಮ್ಮನೆ ನೀನೇಕೆ ಇಂಬುಗೊಡುವೆ? ಇಂಬಿನಿಂದ ಬಾಳುವ ಬುದ್ಧಿವಂತಿಕೆಯು ನಿನ್ನಲ್ಲಿರುವಾಗ ಮೋಸಗಾರನೆಂದೂ ಹೀನನೆಂದೂ ನಿನಗೆ ಹೆಸರು ಬರುವುದನ್ನು ನಾನು ಸಹಿಸಲಾರೆ. ಕಾರಣ ನೀನು ಮೃಗೇಂದ್ರನ ನ್ಯಾಯಾಸ್ಥಾನಕ್ಕೆ ಬಂದು ನಿರಪರಾಧಿತ್ವವನ್ನು ಸಿದ್ಧಪಡಿಸಿಕೊ. ನಿನ್ನ ಪಕ್ಷವನ್ನು ಸಮರ್ಪಕವಾಗಿ ಮಂಡಿಸುವ ಕೌಶಲವು ನಿನಗುಂಟು.

ಆದರೂ ನೀನು ಸಭೆಗೆ ಏಕೆ ಬರಲೊಲ್ಲೆ ? ” ಎಂದು ಗೆಳೆತನದ ಸಲುಗೆಯ ದನಿಯಿಂದ ಕೇಳಿದನು.

“ ಗೆಳೆಯಾ, ಗಿಡುಗರಾಯಾ, ನನಗೆ ಬಂದಿರುವ ಕಹಿ ಅನುಭವಗಳಿಂದ ಈ ಲೋಕದಲ್ಲಿ ‘ ನ್ಯಾಯ ’ ಎಂಬ ಪದಾರ್ಥವು ಏನಾದರೂ ಉಂಟೆ? ಎಂಬುದೇ ತಿಳಿಯದಾಗಿದೆ. ತುತ್ತು ಮಾಡಿ (ಬಾಯಲ್ಲಿ) ಉಣಿಸ ಹೋದ ಕೈಗೆ ಕಚ್ಚಿಸಿಕೊಳ್ಳಬೇಕಾಗುವುದು. ಸರದಾರ ತೋಳಪ್ಪನವರು ನನ್ನಿಂದ ಕೆಲಸ ಮಾಡಿಸಿಕೊಂಡು, ನನಗೇ ಹೇಗೆ ಕೈತೋರಿಸಿದರೆಂಬುದನ್ನು ನೀನು ಕಣ್ಣಾರೆ ಕಂಡಿರುವೆ. ಇಂತಹ ಅನುಭವಗಳಿಂದ ನಾನು ಬುದ್ಧಿಗಲಿಯಬೇಡವೆ ? ಬಿದ್ದ ಏಟುಗಳಿಂದ ಬುದ್ಧಿಗಲಿಯದ ಕೋಣನಾಗುವುದಕ್ಕೆ ನಾನು ಸಿದ್ಧನಿಲ್ಲ. ಜನಸಾಮಾನ್ಯರ ಮಾತಿನಲ್ಲಿ ‘ ನ್ಯಾಯ ’ ಎಂಬುದಕ್ಕೇನು ಅರ್ಥ ಉಂಟೆಂದು ಗೊತ್ತೆ? ಆ ನ್ಯಾಯನೆ ಈ ಲೋಕದ ‘ ನ್ಯಾಯ; ’ ಆ ಲೋಕದ—ನ್ಯಾಯ. ಎತ್ತಿನಂತಹ ಎಗ್ಗರೂ, ಹದ್ದಾದ ಮುದುವರೂ ಆ ಲೋಕದ ನ್ಯಾಯ—ನೀತಿಗಳ ಹಂಬಲಿಗರಾಗಿರುತ್ತಾರೆ. ‘ ಮಾದೇವರ ಮುಂತಣಾತ ’ ನೆಂಬುದು ಈ ಲೋಕದಲ್ಲಿ ನಗೆಮಾತು ಆಗಿದೆ. ಗಿಡುಗರಾಯ, ನಿನ್ನ ಬಳಗದ ಆ ಗರುಡನು ಹಲ್ಲು ಬಿದ್ದು ಮುದುಪನಾದ ಬಳಿಕ ವಿಷ್ಣುವಿನ ದಾಸಾನುದಾಸನಾಗಿದ್ದಾನೆ. ಆದರೇನು ? ಆತನು ಪೂರ್ಣವಯಸ್ಸಿನಲ್ಲಿ ನಾಗರನ್ನು ಪೀಡಿಸಿದ್ದುದನ್ನೂ ಗೋಳಾಡಿಸಿದ್ದುದನ್ನೂ ಈ ಲೋಕವು ಎಂದೆಂದಿಗೂ ಮರೆಯಲಾರದು. ಆ ಲೋಕದ ಕಾಲ್ಪನಿಕ ಆನಂದಕ್ಕಾಗಿ ಈ ಲೋಕದೊಳಗಿನ ಪ್ರತ್ಯಕ್ಷ ಸುಖವನ್ನು ತೊರೆಯಲು ನಾನು ಸಿದ್ಧನಿಲ್ಲ. ಗೆಳೆಯಾ ನೀನು ನನ್ನ ಕೈವಾರಿಯಾದುದರಿಂದ ನಿನಗೆ ನನ್ನ ಹೃದಯವನ್ನು ಬಿಚ್ಚಿ ತೋರಿಸಿದ್ದೇನೆ. ಇದರಲ್ಲಿ ನನ್ನದೇನಾದರೂ ತಪ್ಪು ಇದ್ದರೆ ನೀನು ಹೇಳು. ”

ಸಲುಹುವನು. ನರಿಯಣ್ಣ, ನಿನ್ನ ವಿಚಾರವೇ ಬೇರೆ. ಯಾವ ಒಂದು ಬಗೆಯ ಸಹಕಾರವಿಲ್ಲದ, ಕೂಡಿನಡೆಯದ ಪ್ರಾಣಿಗಳಲ್ಲಿ ಒಕ್ಕಟ್ಟು ಎಂದೂ ಇಲ್ಲ. ಒಕ್ಕಟ್ಟು ಇಲ್ಲದೆ ಏಳ್ಗೆಯೂ ಇಲ್ಲ. ಒಕ್ಕಟ್ಟು, ಏಳ್ಗೆಗಳ ಮಾತನ್ನು ಒಂದೆಡೆಗೆ ಇರಿಸಿದರೂ ನಿನ್ನ ಹಾನಿಯಾಗಬಾರದೆಂದಾದರೂ ನನ್ನ ಮಾತಿಗೆ ಕಿವಿಗೊಡು. ನೀನು ಮೃಗೇಂದ್ರನ ನ್ಯಾಯಾಸ್ಥಾನಕ್ಕೆ ಬಾರದೆ ಇದ್ದಲ್ಲಿ ಆತನು ತನ್ನ ಎಲ್ಲ ಸೈನಿಕರು, ಸರದಾರರನ್ನು ಕೂಡಿಕೊಂಡು ಬಂದು ನಿನ್ನ ಹೇಳಹೆಸರಿಲ್ಲದಂತೆ ಮಾಡದೆ ಬಿಡನು. ಇದಕ್ಕೂ ಹೆಚ್ಚು ನಾನು ಹೇಳಲಾರೆ. ”

ಗಿಡುಗನ ಸೂಚನೆಯಂತೆ ಕರಟಕನಿಗೆ ಮೃಗೇಂದ್ರನ ಓಲಗಕ್ಕೆ ಹೊರಡದೆ ಬೇರೆ ಗತಿಯೆ ಇದ್ದಿಲ್ಲ.

---

## ಕೈವಾಡ ೫

---

ಕರಟಕನು ನ್ಯಾಯಾಸ್ಥಾನಕ್ಕೆ ಬಂದುದರಿಂದ ಮೃಗೇಂದ್ರನಿಗೆ ಹಿಗ್ಗು. ತನ್ನ ಗೌರವವು ಒಂದು ತೂಕ ಹೆಚ್ಚಿತೆಂಬ ಬಿಂಕ. ಕರಟಕನು ಬಾರದೆ ಇದ್ದಲ್ಲಿ ಮೃಗ–ಪಕ್ಷಿಗಳಲ್ಲೆಲ್ಲ ಸಿಂಹರಾಜನ ಶಕ್ತಿ–ಸಾಮರ್ಥ್ಯದಲ್ಲಿ ಅವಿಶ್ವಾಸವುಂಟಾಗುತ್ತಿತ್ತು. ಈ ಮೊದಲು ಯಾರಿಗೂ ನೀಗದ ರಾಯಭಾರವು ತನ್ನಿಂದ ಕೈಗೂಡಿತೆಂಬ ಸಂತೋಷವು ಗಿಡುಗನ ಕಣ್ಣಲ್ಲಿ ಹೊರಹೊಮ್ಮುತ್ತಿತ್ತು. ಸಹಾನುಭೂತಿ, ಪ್ರೀತಿಗಳಿಂದ ಎಂತಹ ಕೆಲಸವೂ ಸಾಧ್ಯವೆಂಬುದನ್ನು ತಾನು ಸಿದ್ಧಪಡಿಸಿದೆನೆಂಬ ಹೆಮ್ಮೆ



ಗಿಡುಗನಿಗೆ. ಆದರೆ ಸಮಾನಶೀಲನಾದ ನರಿಯಣ್ಣನಲ್ಲಿ ಇದ್ದ ಪ್ರೀತಿ, ಸಹಾನುಭೂತಿಗಳನ್ನು ಗಿಳಿ, ಪಾರಿವಾಳ ಮೊದಲಾದವುಗಳ ಸಂಗಡಲೂ ವ್ಯಕ್ತಪಡಿಸಬೇಕೆಂಬ ಅರಿವು ಮಾತ್ರ ಗಿಡುಗನಲ್ಲಿ ಇನ್ನೂ ತಲೆದೋರಿದಂತೆ ಕಾಣಲಿಲ್ಲ. ಸಮಾನಶೀಲರಾದ ಜಾತಿ, ಬಣದವರೊಡನೆ ಪ್ರೀತಿ ವಿಶ್ವಾಸದಿಂದ ನಡೆದುಕೊಳ್ಳುವಂತೆ, ಎಲ್ಲ ಜಾತಿ–ಮತಗಳೊಡನೆಯೂ ಹಾಗೆಯೇ ಹಿತದಿಂದ ಹೊಂದಿಕೊಂಡಿರಬೇಕೆಂಬುದನ್ನು ಮಾನವರೇ ಅರಿಯದಿದ್ದಾಗ ಪಶು-ಪಕ್ಷಿಗಳಿಗೆ ಈ ವಿಷಯದಲ್ಲಿ ಹೇಗೆ ತಾನೆ ಹೆಸರಿಡಲಿಕ್ಕಾದೀತು?

ಇಂದು ಕರಟಕನ ನ್ಯಾಯವಿಚಾರಣೆಯಾಗುವುದೆಂದು ಮೊದಲೆ ತಿಳಿದುದರಿಂದ ಓಲಗವು ಕಿಕ್ಕಿರಿದು ತುಂಬಿತ್ತು. ಸಿಂಹರಾಜನು ಧೀರಗಂಭೀರ ವೃತ್ತಿಯಿಂದ ಸಿಂಹಾಸನಸ್ಥನಾಗಿದ್ದನು. ಮೇಘನಾದದಿಂದ ಕರಟಕನ ಮೇಲಣ ಆರೋಪಗಳನ್ನೆಲ್ಲ ಬಿಡಿಬಿಡಿಯಾಗಿ ಓದಿದನು. 'ಇನ್ನು ಇದಕ್ಕೆಲ್ಲ ನೀನು ಏನು ಹೇಳುವೆ?' ಎಂದು ಕೊನೆಗೆ ಪ್ರಶ್ನೆ ಮಾಡಿದನು. 'ಈ ಬಗೆಯ ಮಹಾಪರಾಧಗಳಿಗೆ ಶಾಸ್ತ್ರದಲ್ಲಿ ದೇಹಾಂತ ಪ್ರಾಯಶ್ಚಿತ್ತವನ್ನು ಹೇಳಿದೆ;' ಎಂದು ಅಪ್ಪಣೆ ಕೊಡಿಸಿದನು.

ಕರಟಕನು, ತನ್ನ ಮೇಲೆ ಹಾಕಿದ ಬಗೆಬಗೆಯ ಆರೋಪಗಳ ಪಟ್ಟಿಯನ್ನು ಕೇಳಿ ಇದಕ್ಕೆ ತಲೆದಂಡವು ತಪ್ಪಿದುದಲ್ಲವೆಂದು ತಿಳಿದು ಗಾಬರಿಗೊಳ್ಳಬಹುದೆಂದು ಸಭಿಕರೆಲ್ಲರೂ ಎಣಿಸಿದ್ದರು. ಆತನ ಮುಖಲಕ್ಷಣಗಳಲ್ಲಿ ಆಗುವ ಹೆಚ್ಚುಕಡಿಮೆಗಳನ್ನು ಸೂಕ್ಷ್ಮವಾಗಿ ನಿರೀಕ್ಷಿಸುವುದಕ್ಕಾಗಿ ಎಲ್ಲರೂ ಕಣ್ಣಲ್ಲಿ ಕಣ್ಣಿಟ್ಟು ಕರಟಕನನ್ನೇ ನೋಡುತ್ತಿದ್ದರು. ಕರಟಕನು ತನ್ನ ಮೇಲಣ ಆರೋಪಗಳ ನಾಮಾವಳಿಯನ್ನೂ ಅದಕ್ಕಾಗಿ ತನಗಾಗಬಹುದಾದ ಶಾಸನವನ್ನೂ ಕಿವಿಯಾರೆ ಕೇಳಿದ ಮೇಲೂ, ಅವಿಚಲಿತನಾಗಿ ಯಾವ ಮನೋವಿಕಾರವನ್ನೂ ಮೋರೆಯ ಮೇಲೆ

ತೋರಗೊಡದೆ ಪ್ರಶಾಂತನಂತೆ ಕುಳಿತುದನ್ನು ಕಂಡು ಎಲ್ಲರೂ ಸೋಜಿಗ ಗೊಂಡರು. ಕರಟಕನು ಒಂದರೆನಿಮಿಷ ಕಣ್ಣು ಮುಚ್ಚಿ, ಏನೋ ಧ್ಯಾನಿಸಿದವನಂತೆ ಮಾಡಿ, ಕೆಳಗಣ ದನಿಯಲ್ಲಿ ಮೆಲ್ಲನೆ ಮಾತಿಗೆ ಮೊದಲು ಮಾಡಿದನು.

“ ಧರ್ಮ–ಪೀಠವನ್ನಲಂಕರಿಸಿದ ಮಹಾಸ್ವಾಮಿಯವರೆ, ಈ ರತ್ನಸಿಂಹಾಸನದ ಸಾಕ್ಷಿಯಾಗಿ ಹೇಳುತ್ತೇನೆ; ನಾನು ಸಂಪೂರ್ಣವಾಗಿ ನಿರಪರಾಧಿಯಾಗಿದ್ದೇನೆ, ” ಹೀಗೆಂದವನೆ ನಿಷ್ಕಪಟತನವನ್ನು ಸೂಚಿಸುವ ಮುಗುಳುನಗೆಯನ್ನು ಎಳೆತಂದು ತನ್ನ ಮೇಲಣ ಒಂದೊಂದೆ ಆರೋಪವನ್ನು ಎತ್ತಿ, ಅದು ಹೇಗೆ ನಿರಾಧಾರವಾದುದು, ಹುರುಳಿಲ್ಲದುದು ಅಥವಾ ದ್ವೇಷಮೂಲಕವಾದುದು ಎಂಬುದನ್ನು ವಿವರಿಸುತ್ತ ತನ್ನ ಮಾತಿನ ಚಮತ್ಕೃತಿಯಿಂದ ಎಲ್ಲ ಆರೋಪಗಳನ್ನೂ ಅಲ್ಲಗಳೆದನು. ಕರಟಕನು, ತನ್ನ ವಾಗ್ವೈಖರಿಗೆ ಮರುಳಾಗಿ, ಬೆರಗಾಗಿ ಬಾಯಿಬಿಟ್ಟು ಕೊಂಡು ಕುಳಿತವರ ಮೇಲೆ ತನ್ನ ಪ್ರಭುತ್ವದ ತೀಕ್ಷ್ಣದೃಷ್ಟಿಯನ್ನು ಬೀರಿದನು. ದನಿಯನ್ನು ಎತ್ತರಿಸಿ ‘ ನಾನು ಅಪರಾಧಿಯೆಂದು ಸಾಕ್ಷಿ ನುಡಿಯಲು ಯಾರಾದರೂ ಸಿದ್ಧರಿದ್ದರೆ ಮುಂದೆ ಬರಲಿ ’ ಎಂದು ಸಾರಿದನು. ಆತನ ನಿಂತ ಭಂಗಿಯನ್ನೂ , ಆ ಮಾತಿನ ಠೀವಿಯನ್ನೂ, ನೋಟದ ಬಿಂಕವನ್ನೂ ಕಂಡವರಿಗೆ ಕರಟಕನ ನಿರಪರಾಧಿತ್ವದ ವಿಷಯಕ್ಕೆ ಸಂದೇಹಪಡುವುದು ಸರಿಯೆ ? ಎಂದೆನಿಸುವಂತಿತ್ತು.

ಸಾಕ್ಷಿ ಹೇಳಲು ಮೊದಲು ಏಳುವುದಕ್ಕೆ ಒಮ್ಮೆಲೆ ಯಾರಿಗೂ ಎದೆಯಾಗಲಿಲ್ಲ. ಆದರೂ ತೋಳನ ಪ್ರಯತ್ನದಿಂದ ಹಲಕೆಲರು ಮುಂದೆ ಬಂದರು. ಅವರಲ್ಲಿ ಕೋಳಿ ಮತ್ತು ಮೊಲದ ಸಾಕ್ಷಿಗಳು ಬಹಳ ಪರಿಣಾಮಕಾರಿಯಾದುವು. ತೋಳ, ಏದುಗಳು ನರಿಯಣ್ಣನ ವಿರುದ್ಧ ಹೋಗಿ ಸಾಕ್ಷಿ ಹೇಳಿದ್ದರೂ ಅದಕ್ಕೆ ಬೆಲೆಯಿರಲಿಲ್ಲ. ಕೋಳಿ ಮತ್ತು

ಮೊಲವು ಒಳಗೊಂದು ಹೊರಗೊಂದನ್ನು ಅರಿಯದ ನಿಷ್ಕಪಟ ಪ್ರವೃತ್ತಿಯ ಸರಲಸ್ವಭಾವದ ಜೀವಿಗಳು. ಇಂತಹರ ಮಾತಿನಲ್ಲಿ ಕೃತ್ರಿಮವಿರುವು ದಿಲ್ಲ. ಆದುದರಿಂದ ಸಿಂಹರಾಜನು ಅವರ ಹೇಳಿಕೆಗೆ ಹೆಚ್ಚು ಮಹತ್ವ ಕೊಟ್ಟು ಕರಟಕನು ಅಪರಾಧಿಯೆಂದು ತೀರ್ಪು ಮಾಡಿದನು; ಮತ್ತು ಈತನನ್ನು ಗಲ್ಲಿಗೆ ಏರಿಸಬೇಕೆಂದು ಶಿಕ್ಷೆವಿಧಿಸಿದನು.

ಈ ಉಗ್ರ ಶಿಕ್ಷೆಯನ್ನು ಕೇಳಿ ಕೆಲರು ಗಡಗಡನೆ ನಡುಗಿದರು. ಕರಟಕನನ್ನು ಕರೆತಂದು ಗೆಳೆಯನ ಜೀವ ಹಿಂಡಲು ತಾನು ಕಾರಣ ನಾದೆನಲ್ಲ, ಎಂದು ಗಿಡುಗನು ಮಿಡುಕಿದನು. ಹುಲಿರಾಯನಿಗೆ ಸಹ ಆದ ಈ ಶಿಕ್ಷೆಯು ಕಠೋರವೆನಿಸಿತು. ಹೆಚ್ಚಾದರೆ ಆಜನ್ಮ ಕಾರಾಗೃಹದಂತಹ ಏನಾದರೊಂದು ಶಾಸನವಾಗಬಹುದೆಂದು ಕೋಣ, ಕುರಿ ಮೊದಲಾದ ವರೆಲ್ಲ ಬಗೆದಿದ್ದರು. ‘ ಶಿಕ್ಷೆಯೆಂದರೆ ಸೇಡು ತೀರಿಸಿಕೊಳ್ಳುವುದೆ, ದೊರೆಯೆ ? ’ ಪಂಡಿತವಕ್ಕಿಯು ಕೇಳಿತು. ‘ ಶಾಸನವು ಸುಧಾರಣೆಗಾಗಿ ಇರತಕ್ಕದ್ದು, ಎಂದು ಶಾಸ್ತ್ರವು ಹೇಳುತ್ತದೆ. ಅಪರಾಧಿಗಳನ್ನು ಶೂಲ ಕ್ಕೇರಿಸಿದರೆ ಅವರಿಗೆ ತಮ್ಮ ಸುಧಾರಣೆಯನ್ನು ಮಾಡಿಕೊಳ್ಳಲು ಏನು ಎಡೆ ಕೊಟ್ಟಂತೆ ಆಯ್ತು ? ’ ಎಂದು ಗಿಳಿಯು ಶಾಸ್ತ್ರವನ್ನು ನುಡಿದಿತು.

ಮೃಗೇಂದ್ರನು ಇದಾವುದಕ್ಕೂ ಕಿವಿಗೊಡದೆ ತನ್ನ ದೃಢನಿಶ್ಚಯ ವನ್ನಿಂತು ಸಾರಿದನು. “ ಒಮ್ಮೆ ವಿಧಿಸಿದ ಶಿಕ್ಷೆಯು ಆಚರಣೆಯಲ್ಲಿ ಬರಲೇಬೇಕು. ಹೀಗೆ ಗಳಿಗೆಗೊಮ್ಮೆ ತೀರ್ಪುಗಳನ್ನು ಮಾರ್ಪಡಿಸಿದರೆ ಆಡಳಿತವನ್ನು ನಡೆಸುವುದೇ ಅಶಕ್ಯವಾದೀತು. ಈಗ ನಾನು ಆಡಿದಂತೆ ಆಗಲೇ ಬೇಕು. ಸರದಾರ ತೋಳಪ್ಪನವರೆ, ಇದೀಗ ನೀವೇ ಈ ಕೆಲಸಕ್ಕೆ ಮುಂದೆ ಬನ್ನಿ. ಮಹಾಪರಾಧಿಯಾದ ಕರಟಕನ ಅಸ್ತಿತ್ವ

ವನ್ನು ಇಲ್ಲದಂತೆ ಮಾಡಿ, ನಮ್ಮ ಪ್ರಭುತ್ವಕ್ಕೆ ಬಂದ ಕುಂದಕವನ್ನು ತೊಡೆದುಬಿಡಿರಿ. '

ನರಿಯ ಜಾತಿಯ ಮೇಲೆಯೆ ಹಲ್ಲು ತಿನ್ನುತ್ತಿದ್ದ ತೋಳನಿಗೆ ಈ ಕೆಲಸವು ತನ್ನ ಕಡೆಗೆ ಬಂದುದಕ್ಕಾಗಿ ಸಂತೋಷವೆ ಆಯ್ತು. ಚೆನ್ನಾದ ಹುರಿಯುಳ್ಳ ಹಗ್ಗದ ಒಂದು ತುದಿಯನ್ನು ಕರಟಕನ ಕೊರಳಿಗೆ ಕಟ್ಟಿದನು; ಇನ್ನೊಂದು ತುದಿಯನ್ನು ಅಲ್ಲಿಯೆ ವಿಶಾಲವಾಗಿ ಹಬ್ಬಿದ ಆಲದ ಎತ್ತರವಾದ ನಿಡುಗೊಂಬೆಗೆ ಕಟ್ಟುವ ಎತ್ತುಗಡೆ ನಡೆದಿತು. ನರಿಯಣ್ಣನನ್ನು ಒಂದು ಎತ್ತರವಾದ ಡಬ್ಬಿಯ ಮೇಲೆ ಕುಳ್ಳಿರಿಸಿ ಹಗ್ಗವನ್ನು ಕಿರಿದು ಮಾಡಿ ಮರಕ್ಕೆ ಕಟ್ಟಿ ಆಯ್ತು. ಇನ್ನು ನರಿಯಣ್ಣನ ಬುಡದ ಡಬ್ಬಿಯನ್ನು ಈಚೆಗೆ ಎಳೆಯಲು ಕೊನೆಯ ಅಪ್ಪಣೆಯನ್ನು ಕೊಡುವ ಮೊದಲು ' ಕರಟಕರಾಯ ' ಸಿಂಹರಾಜನೆಂದನು. " ನಿನ್ನ ದುಷ್ಕರ್ಮಗಳ ಬಗೆಗೆ ನಿನಗೆ ಕೆಡಕು ಎನಿಸುತ್ತಿದ್ದರೆ, ಪಶ್ಚಾತ್ತಾಪದಿಂದ ಬೆಂದ ಮನಸಿನವನಾಗಿ ಆ ಪರಮಾತ್ಮನಲ್ಲಿ ಪ್ರಾರ್ಥಿಸು. ಹೆಂಡಿರು–ಮಕ್ಕಳಿಗೆ ನಿನ್ನ ಅಂತ್ಯೇಚ್ಛೆಗಳನ್ನೇನಾದರೂ ತಿಳಿಸುವುದಿದ್ದರೆ ಸ್ವಲ್ಪದರಲ್ಲಿ ಹೇಳು. ನಿನಗೆ ಎರಡು ನಿಮಿಷದ ಅವಧಿ ಕೊಡುತ್ತೇನೆ. "

ಕರಟಕನ ಕೊರಳ ಉರುಲು ಬಿಗಿಯಲು ಅಣಿಯಾಗಿದೆ. ಕರಟಕನ ಕಣ್ಣಿಂದ ನೀರು ಧಾರೆಧಾರೆಯಾಗಿ ಹರಿಯುತ್ತಲಿದೆ. ಇದೀಗ ಅವನ ಮುಖಮುದ್ರೆಯಲ್ಲಿ ಬದಲಾಗಿ ದುಃಖವು ತಾನೆತಾನಾಗಿ ಒಡಮೂಡಿದೆ. ಈ ಅವಸ್ಥೆಯಲ್ಲೂ ಆತನು ಕೈ ಜೋಡಿಸಿ, ಕಣ್ಣು ಮುಚ್ಚಿಕೊಂಡು, ಏನೊ ಮಂತ್ರಗಳನ್ನು ಹೇಳುತ್ತಿದ್ದಂತೆ ಕಂಡಿತು. ಅಜಾತಶತ್ರುಗಳಾದ ಆಡು, ಕುರಿ, ಮೊಲಗಳಿಗಂತೂ ಕರಟಕನ ಈ ವಿಪನ್ನಸ್ಥಿತಿಯನ್ನು ನೋಡಿ ಸಹಿಸಲಿಕ್ಕಾಗದೆ ಕಣ್ಣೀರ ಕೋಡಿ ಹರಿದಿತು; ಅವುಗಳಲ್ಲಿ ಕೆಲವಕ್ಕೆ ಕಣ್ಣಿಗೆ ಕತ್ತಲಿ ಕವಿದು ನೆಲವು ಕೆಳಗೆ ಮೇಲಾದಂತೆ

ಭಾಸವಾಗಹತ್ತಿತು. ‘ಮೈಮೇಲೆ ಏರಿಬರುವ ಕರಟಕನಿಗಿಂತ ಈ ಬಗೆಯ ಹಗರಣದಲ್ಲಿಯ ಕರಟಕನಿಗೆ ನಾವು ಬಹಳ ಹೆದರಬೇಕು.’ ಎಂದು ತೋಳಪ್ಪನೂ ಕಾಮಿಯೂ ಒಮ್ಮೆಲೆ ಉಸುರಿದರು. ‘ಹಗೆಯಾದರೆ ಏನಾಯ್ತು? ಒರ್ವನು ಸಂಕಟದಲ್ಲಿ ಒದ್ದಾಡುವಾಗಲೂ ಆತನ ಬಗೆಗೆ ಸಹಾನುಭೂತಿಯನ್ನು ತೋರಿಸುವಷ್ಟು ಸಜ್ಜನಿಕೆ ಇರ ಬಾರದೆ?’ ಎಂದು ಬದಿಯಲ್ಲಿಯೆ ನಿಂತ ಕುದುರೆಯು ಹೇಕರಿಸಿತು.

ನರಿಯಣ್ಣನು ಮೆಲ್ಲನೆ ಕಣ್ದೆರೆದು ತನ್ನ ಕೊನೆಯ ಹೇಳಿಕೆಗೆ ಆರಂಭಿಸಿದನು: ‘ಮೃಗೇಂದ್ರರೆ, ನನ್ನ ಹೆಂಡತಿಗೆ, ವಿಶೇಷವಾಗಿ ಮಕ್ಕಳಿಗೆ ತಿಳಿಸುವುದು ಒಂದೇ ಮಾತಿದೆ: ನನ್ನ ಚರಿತ್ರದಿಂದ ಪಾಠ ಕಲಿಯಿರಿ; ಯಾರ ಆಳಾಗಬೇಡಿರಿ; ಎಂಬುದೇ ಅದು. ನಾನು ಶ್ರೀಮನ್ಮಹಾರಾಜರವರಲ್ಲಿಟ್ಟ ನಿಷ್ಠೆಯ ಕಾಲುಪಾಲನ್ನಾದರೂ ಶ್ರೀಪರಮಾತ್ಮನಲ್ಲಿಟ್ಟಿದ್ದರೆ, ಈ ರತ್ನಪೀಠಕ್ಕೆ ಸಲ್ಲಿಸಿದ ಸೇವೆಯ ಅಲ್ಪಾಂಶದಿಂದಾದರೂ ಆ ಸತ್ಯಪೀಠದ ತೊತ್ತಾಗಿದ್ದರೆ ನನ್ನ ಜನ್ಮದ ಉದ್ಧಾರವು ಎಂದೊ ಆಗಿಬಿಡುತ್ತಿತ್ತು. ನಾನು ಶಾಶ್ವತ ಶಾಂತಿಯನ್ನು—ಮೋಕ್ಷಸುಖವನ್ನಾದರೂ ಪಡೆಯುತ್ತಲಿದ್ದೆ. ಹಂಚಿಕೆ—ಹವಣಿಕೆಗಳಿಂದ ನಾನು ಆಡಳಿತವನ್ನು ಸಾಗಿಸಿರದಿದ್ದರೆ ಜಂಬೂದ್ವೀಪದ ಈ ಸಾಮ್ರಾಜ್ಯವು ಮಹಾರಾಜರವರ ಕೈ ಬಿಟ್ಟು ಎಂದೊ ಹಳೆಯ ಮಾತಾಗುತ್ತಿತ್ತು. ಮಹಾಪ್ರಭುಗಳ ಉಂಡ ಉಪ್ಪಿಗೆ ಎರಡು ಬಗೆಯಬಾರದೆಂದು ಸಾಮ್ರಾಜ್ಯದ ಹಿತವನ್ನು ಸಾಧಿಸುವಲ್ಲಿ ನನಗೆ ಹಲವರು ಹಗೆಗಳಾದರು. ಪ್ರಜೆಗಳ ಪಕ್ಷವನ್ನು ಕಟ್ಟಿದರೆ ರಾಜರು ಮುನಿಯುವರು; ರಾಜರ ಪಕ್ಷ ವಹಿಸಿದರೆ ಪ್ರಜೆಗಳು ಕೋಪಗೊಳ್ಳುವರು. ಶ್ರೀಮನ್ಮಹಾರಾಜರಲ್ಲಿ ದೂರು ಹೇಳಿ, ನನ್ನಲ್ಲಿ ಹಗೆತನವನ್ನು ಪ್ರದರ್ಶಿಸಿರುವ ಈ ಎಲ್ಲ ವರ್ಗದ

ಪ್ರಾಣಿಗಳೇ, ನನ್ನಿಂದ ತಮ್ಮಡಿಗಳ ಅಲ್ಪಸೇವೆಯಾದರೂ ಸಂದಿರುವು ದೆಂಬುದಕ್ಕೆ ಸಾಕ್ಷಿ. ''

“ ಕಟಕ! ಸಾಕು, ಇನ್ನು ನಿನ್ನ ಬಾಯ್ಬಡಕತನ. ಈ ಪ್ರಾಣಿಗಳ ಹಗೆತನದ ಅರ್ಥವನ್ನು ನೀನು ಹೀಗೆ ತಿರುವು ಮುರುವಾಗಿ ಮಾಡುವುದು ನಿನ್ನ ವಂಚಕ ಬುದ್ಧಿಯ ದ್ಯೋತಕವಾಗಿದೆ. ನಿನ್ನನ್ನು ಇನ್ನು ಹೆಚ್ಚು ಹೊತ್ತು ಹೊರಗೆ ಇರಗೊಡುವುದು ತರವಲ್ಲ. ನೀನು ನಿನ್ನ ಬಣ್ಣದ ಮಾತುಗಾರಿಕೆಯಿಂದ ನಮಗೆಲ್ಲ ದಿಗ್ಭ್ರಮೆಯನ್ನುಂಟು ಮಾಡುವಂತೆ ತೋರುತ್ತದೆ. ಆದುದರಿಂದ ನಿನ್ನಂತಹರಿಗೆ ಹೆಚ್ಚು ಮಾತನಾಡಗೊಡದಿರುವುದೇ ಲೇಸು. ''

“ ಒಡೆಯರ ಅಪ್ಪಣೆಗೆ ತಲೆವಾಗಲೇ ಬೇಕಲ್ಲವೆ? ಆದರೂ ತಮ್ಮಲ್ಲಿ ಒಂದೇ ಮಾತನ್ನು ಅರಿಕೆಮಾಡಿಕೊಳ್ಳಲಿದ್ದೇನೆ. ತಮಗೆ ಇಷ್ಟವಿಲ್ಲದುದನ್ನು ಕಾಣಬೇಕಾಗುವುದೆಂದು ಕಣ್ಣು ಮುಚ್ಚಿಕೊಳ್ಳುವುದು ಎಷ್ಟು ಒಳಿತೊ, ಬುದ್ಧಿಯು ತಮ್ಮೆದುರು ಅನುಕೂಲ ಪ್ರತಿಕೂಲ ಸಂಗತಿಗಳನ್ನೆಲ್ಲ ತಂದು ನಿಲ್ಲಿಸುವುದೆಂದು ಅದರ ಕತ್ತು ಹಿಸುಕುವುದೂ ಅಷ್ಟೇ ಒಳಿತು. ನಾವು ಕಣ್ಣುಮುಚ್ಚಿಕೊಂಡರೂ ವಸ್ತುಸ್ಥಿತಿಯಲ್ಲಿ ಎಳ್ಳನಿತೂ ಬದಲಾಗದು. ಬೆಕ್ಕು ಕಣ್ಣು ಮುಚ್ಚಿಕೊಂಡರೂ ಒಡೆಯನಿಗೆ ಅದು ಕಾಣದೆ ಇದ್ದೀತೆ? ಬೆನ್ನಮೇಲೆ ಬರುವ ಬಡಿಗೆ ತಪ್ಪೀತೆ? ಮಹಾಪ್ರಭು, ನಾನು ತಮಗೆ ಕಣ್ಣುಕಟ್ಟುಮಾಡಿ ದಿಗ್ಭ್ರಮೆಯನ್ನುಂಟು ಮಾಡಬಯಸುವುದಿಲ್ಲ.

“ ಅಂದು ಸಾಮ್ರಾಜ್ಯದ ಮೇಲೆ ಬಂದ ಸಂಕಟವನ್ನು ನಿವಾರಿಸಲು ನಾನೆಂತು ಹೆಣಗಾಡಿದೆನೆಂಬುದನ್ನು, ಮಹಾಸ್ವಾಮಿಯವರ ದಿವ್ಯಚಿತ್ತಕ್ಕೆ ಇನ್ನೊಮ್ಮೆ ನೆನಪು ಮಾಡಿಕೊಡಲು ಅಪೇಕ್ಷಿಸುತ್ತೇನೆ. ಮಹಾರಾಜರ ರಾಜ್ಯಕ್ಕೆ ಆಗಾಗ ಪೀಡೆಯನ್ನುಂಟು ಮಾಡುತ್ತಿದ್ದ ಆ

ಕರ್ಪೂರತಿಲಕನೆಂಬ ಮದ್ದಾನೆಯನ್ನು ಅಂದು ಹಂಚಿಕೆಯಿಂದ ಹೇಳಹೆಸ ರಿಲ್ಲದಂತೆ ಮಾಡಿದುದಕ್ಕಾಗಿ, ನನಗೆ ಬೇಡಬೇಡವೆಂದರೂ ಪ್ರಭುಗಳು ಬಿರುದು ಬಾವುಲಿಗಳನ್ನಿತ್ತು ದಯೆಗೆಯ್ದುದನ್ನು ಮರೆತರೆ, ಕೃತಘ್ನತನದ ಮಹಾಪಾತಕಕ್ಕೆ ನಾನು ಗುರಿಯಾಗಬೇಕಾದೀತು! ಅರಸು-ಕುಲವು ಜನಸಾಮಾನ್ಯರಂತೆ ಎಂದೂ ಸಿಕ್ಕಂತೆ, ಸಿಕ್ಕಲ್ಲಿ ಬೆಳೆವುದಲ್ಲ. ಕಸ್ತೂರಿ ಯಂತೆ ಅಪರೂಪ; ಹುಲ್ಲಿನಂತೆ ವೆಗ್ಗಳವಲ್ಲ. ಆನೆ-ಕೋಣ-ಎತ್ತು ಕೋಳಿಗಳ ಬಳಗವೊ? ಅದು ಅಸಂಖ್ಯಗಣ. ಈ ಎಲ್ಲರ ಬೆಂಬಲದಿಂದ ಕರ್ಪೂರತಿಲಕನೆಂಬ ಗಜೇಂದ್ರನು ತಾನೇ ಗಣಾಧಿಪನಾಗಿ, ಈ ಸಿಂಹ-ಪೀಠವನ್ನು ಆಕ್ರಮಿಸಬೇಕೆಂದು ಒಳಸಂಚು ನಡಿಸಿದ್ದನಷ್ಟೇ. ಆಗ ಈ ಸರದಾರ ತೋಳಪ್ಪನವರು ಆ ಪಕ್ಷವನ್ನೇ ಸೇರಿಕೊಂಡಿದ್ದರು. ಈ ಶೌನಕರು ಗಜೇಂದ್ರನ ಸ್ತುತಿಪಾಠಕರಾಗಿಯೆ ಬೊಗಳುತ್ತಿದ್ದರು."

"ಆನೆಗಳ ಹೆಸರು ಎತ್ತಬೇಡ" ಮೃಗೇಂದ್ರನು ಗುಡುಗಿದನು; "ಅವರ ಮನೆತನಕ್ಕೂ ನಮಗೂ ಹುಟ್ಟುಹಗೆ. ತಾವು ಒಂದು ಕಾಲಕ್ಕೆ ಈ ನಾಡ ಒಡೆಯರಾಗಿ ಆಳುತ್ತಿದ್ದೆವೆಂಬ ಕನಸನ್ನು ಆನೆಗಳು ಇನ್ನೂ ಮರೆತಿಲ್ಲ. ತಮ್ಮ ಪಟ್ಟವನ್ನು ಮರಳಿ ಪಡೆಯಬೇಕೆಂಬ ಹಂಬಲವನ್ನು ಅವರು ಈಗಲೂ ಬಿಟ್ಟಿಲ್ಲ. ಅಂತಹ ಒಂದು ಬಂಡಾಯವನ್ನು ಅಡ ಗಿಸಿದುದಕ್ಕಾಗಿ ನಿನ್ನಲ್ಲಿ ನಮ್ಮ ಕೃಪೆಯು ಇದ್ದೇ ಇದೆ. ಆ ಸೇವೆಗಾಗಿ ನೀನು ಮನ್ನಣೆಗೆ ಅರ್ಹನಾಗಿದ್ದಂತೆ ಈಗಣ ಪ್ರಜಾ-ಪೀಡೆಯ ಅಪ ರಾಧಕ್ಕಾಗಿ ಶಿಕ್ಷೆಗೂ ಯೋಗ್ಯನಾಗಿರುವೆ."

"ನಾನು ಅಪರಾಧಿಯೆಂದು ಸಿದ್ಧವಾದ ಮೇಲೆ ಅಲ್ಲವೆ, ಮಹಾಪ್ರಭು?" ಕರಟಕನು ನಯದಿಂದ ತಲೆವಾಗಿ ಕೇಳಿದನು: "ನಾನು ಈಗ ಪ್ರಜೆಗಳಿಗೆ ಪೀಡೆಯನ್ನುಂಟು ಮಾಡಿದೆನೆಂಬುದೇ ಮೂಲತಃ ಸುಳ್ಳಿದೆ. ನಾನು ಸಾಮ್ರಾಜ್ಯದ ಸ್ಥೈರ್ಯಕ್ಕಾಗಿ,

ದೃಢತೆಗಾಗಿ ಕೈಕೊಂಡ ಉಪಾಯಗಳಿಂದ ಹಲಕೆಲವರಿಗೆ ಅಲ್ಪ ಸ್ವಲ್ಪ ಅನಾನುಕೂಲ–ತೊಡಕು ತೊಂದರೆ— ಕಷ್ಟ–ನಷ್ಟಗಳು ಸಂಭವಿಸಿರಬಹುದು. ಆದರೆ ಅದು ಅನಿವಾರ್ಯ . ಸಾಮ್ರಾಜ್ಯ ಸಂರಕ್ಷಣೆಯು ನನ್ನ ಮುಖ್ಯ ಗುರಿ. ಅದನ್ನು ಸಾಧಿಸುವಾಗ ವೈಯಕ್ತಿಕವಾಗಿ ಯಾರಿಗಾದರೂ ತಮ್ಮ ಪ್ರಾಣಗಳನ್ನು ಕಳೆದುಕೊಳ್ಳಬೇಕಾದರೂ, ಅವರು, ಅದು ತಮಗೆ ಸ್ವಾರ್ಥತ್ಯಾಗ ಮಾಡಲು ಪ್ರಾಪ್ತವಾದ ಅಮೌಲಿಕ ಸುಸಂಧಿಯೆಂದೇ ಭಾವಿಸುವುದು ಉಚಿತವಲ್ಲವೆ ? ನನ್ನ ಅಭಿಪ್ರಾಯವಂತೂ ಹೀಗಿದೆ. ಮಹಾಸ್ವಾಮಿಯವರ ಸೇವೆಗಾಗಿ ನನ್ನ ಪಂಚ ಪ್ರಾಣಗಳನ್ನು ನಾನು ಮುಡಿಪಾಗಿ ಇರಿಸಿದ್ದೇನೆ. ನನ್ನಂತೆಯೆ, ನಾನು ಹೆರವರನ್ನೂ ಭಾವಿಸಿದ್ದೇನೆ. ತೋಳನಿಗೆ ತೊಂದರೆಯಾದರೆ, ಕೋಳಿಗೆ ಗೋಳಾಟವಾದರೆ, ಆನೆಯ ತಲೆಹೋದರೆ ಅದಕ್ಕೆ ಯಾರು ಮಾಡುವುದೇನು ? ಈ ಧರ್ಮ ಸಿಂಹಾಸನವು ಭದ್ರವಾಗಿ ಉಳಿಯುವುದಕ್ಕೆ ಕ್ಷೀರ ಸೌಮ್ಯೋಪಾಯಗಳನ್ನು ಕೈಕೊಂಡು ಆಡಳಿತ ನಡಸಿದರೂ ಇದಿಷ್ಟು ಸಂಭವಿಸುವುದೇ; ಪ್ರಭು. ”

“ ನಮ್ಮ ಸಾಮ್ರಾಜ್ಯದ ಭದ್ರತೆಗೂ, ತೋಳ, ಕೋಳಿ ಮೊದಲಾದವುಗಳ ಗೋಳಾಟಕ್ಕೂ ಏನು ಸಂಬಂಧ, ಕರಟಕರಾಯ ? ” ಸಿಂಹರಾಜನೆಂದನು.

“ ಇಲ್ಲಿಯೆ, ಮತ್ತೆ, ಮಹಾರಾಜರವರಿಗೆ ಯಾರೋ ತಪ್ಪು ಗ್ರಹಿಕೆಯನ್ನು ಮಾಡಿಕೊಟ್ಟಿರುವುದು ! ” ಕರಟಕನು ಮುಂದೆ ನುಡಿದನು. “ ಸರದಾರ ತೋಳಪ್ಪನು, ಪುಂಡು ಎಬ್ಬಿಸಿ ಆನೆಗಳ ಮನೆತನಕ್ಕೆ ಮರಳಿ ಹಸ್ತಿಪುರದ ಪಟ್ಟವನ್ನು ದೊರಕಿಸಿಕೊಡುವ ಆಸೆ ಹಚ್ಚಿದನು. ಆನೆಗಳ ಬಾಯಿಗೆ ನೀರು ಊರಿತು. ತಾವೆಲ್ಲ ಒಂದೇ ಪಂಗಡದವರೆಂದು ಆನೆಗಳು, ಎತ್ತು ಮತ್ತು ಕೋಣಗಳ ನೆರವು ಪಡೆದುವು. ಕೋಳಿಗಳು

ಆ ತಂಡದ ವರಕವಿಗಳಾಗಿ ಹಾಡಹತ್ತಿದರು; ಎಲ್ಲರಿಗೂ ಒಕ್ಕಟ್ಟಾಗಿ ತಲೆಯೆತ್ತಿರಿ, ನಾಡು ನಿಮ್ಮದೇ ಎಂದು ಹುರಿದುಂಬಿಸಲಾರಂಭಿಸಿದರು. ಮಹಾಸ್ವಾಮಿಯವರೆ, ಒಂದೇ ಎರಡೇ? ಈ ಒಳಸಂಚಿನ ವಿವರವು ಬಹಳವಿದೆ. ಅದನ್ನು ಇನ್ನೊಮ್ಮೆ ನಿವೇದಿಸುತ್ತೇನೆ. ಆಗ ನಾನು ಸ್ವಲ್ಪ ದುರ್ಲಕ್ಷಿಸಿದ್ದರೆ ಕೆಲಸವೆಲ್ಲ ಕೆಟ್ಟು ಹೋಗುತ್ತಿತ್ತು. ನಾನು ಒಮ್ಮೆಲೆ ಹೊಂಚಿನ ಹಂಚಿಕೆಗಳನ್ನೆಲ್ಲ ಹದಗೆಡಿಸಿಬಿಟ್ಟುದರಿಂದ ಇವರೆಲ್ಲ ನನ್ನ ಮೇಲೆ ತಿರುಗಿ ಬಿದ್ದಿದ್ದಾರೆ. ಇವರ ದೂರುಗಳೇ ನಿಜವೆಂದು ಮನವರಿಕೆಯಾಗಿದ್ದರೆ, ದೊರೆಗಳು ವಿಧಿಸುವ ಶಿಕ್ಷೆಗೆ ನಾನು ತಲೆ ಕೊಡಲೇಬೇಕು.

“ಪ್ರಭುವರ್ಯ, ಸರದಾರ ತೋಳಪ್ಪನೇ ನನ್ನ ಪರವಾಗಿ, ತನಗೆ ತಿಳಿಯದಲೆ, ಸಾಕ್ಷಿ ನುಡಿದಿದ್ದಾನೆ. ಅವರ ಪಂಗಡದಲ್ಲಿ ನಾನು ಒಡಕು ಹುಟ್ಟಿಸಿದೆನೆಂದು ಆತನ ದೂರು. ಇವರೆಲ್ಲ ಒಂದುಗೂಡುತ್ತಲಿದ್ದುದನ್ನು ನಾನು ತಡೆದೆನೆಂಬುದಕ್ಕೆ ಬೇರೆ ಪ್ರಮಾಣವೇ ಬೇಕಾಗಿಲ್ಲ. ಸಿಂಹಾಸನಕ್ಕೆ ಎದುರಾಳಿಗಳಾಗಿ ಒಂದುಗೂಡುತ್ತಲಿದ್ದ ಪುಂಡರನ್ನು ಒಡೆದರೆ ಅಪರಾಧವೆ? ಆನೆ, ಎತ್ತು, ಕೋಣ, ಕುರಿ, ತೋಳ ಮೊದಲಾದವರು ಎಂದೆಂದೂ ಒಂದಾಗದಂತೆ ಅವರ ಸ್ಥಾನ (ಮಾನ) ಗಳನ್ನು ಬೇರ್ಪಡಿಸಿಬಿಟ್ಟುದು ಅಪರಾಧವೆ? ಮೊದಲು ಇವರಲ್ಲಿ ಶಾಕಾಹಾರಿಗಳು ಮತ್ತು ಮಾಂಸಾಹಾರಿಗಳೆಂಬ ಎರಡೇ ವಿಭಾಗಗಳನ್ನು ಮಾಡಬೇಕೆಂದಿದ್ದೆ. ಆದರೂ ಆ ಪಂಗಡಗಳು ಆಡಳಿತಕ್ಕೆ ಅಡ್ಡಿಯನ್ನುಂಟು ಮಾಡುವಷ್ಟು ದೊಡ್ಡವಾಗುವವೆಂದು ಕಂಡುಬಂದುದರಿಂದ ಎರಡರ ಬದಲು ಅನೇಕ ಭೇದಗಳನ್ನು ನಿರ್ಮಿಸಿ, ಮಹಾರಾಜರವರ ಸಿಂಹಾಸನವು ಅಬಾಧಿತವಾಗಿ ಉಳಿಯುವಂತೆ ಮಾಡಿದುದು ಅಪರಾಧವೆ? ಇವರೆಲ್ಲರೂ ತಮ್ಮಲ್ಲಿ ಒಕ್ಕಟ್ಟು ನೆಲೆಗೊಳ್ಳುವುದಕ್ಕಾಗಿ, ತಮ್ಮ ಕುಲದ ಮಾತನ್ನಲ್ಲದೆ,

ಎಲ್ಲರಿಗೂ ಸಾಮಾನ್ಯವಾದ ಒಂದು ಭಾಷೆಯನ್ನೂ ಕಲಿವ ಎಣಿಕೆ ಹಾಕಿದ್ದರು. ನಾನು ಇದರ ದುಷ್ಪರಿಣಾಮಗಳನ್ನು ಮುಂಗಂಡು ಒಂದರ ಬದಲು ಎರಡು ಮೂರು ಭಾಷೆಗಳು ಆ ಸ್ಥಾನಕ್ಕಾಗಿ ಸ್ಪರ್ಧಿಸುವಂತೆ ಅವರಲ್ಲಿಯೆ ಏರಾಟ ಹಚ್ಚಿದುದು ಅಪರಾಧವೇ ?

" ಈ ಎಲ್ಲ ಪಂಗಡದವರು ಒಂದೆಡೆಗೆ ಒಕ್ಕಟ್ಟಿನಿಂದ ಕೂಡಿ, ಒಬ್ಬರೊಡನೆ ಒಬ್ಬರು ಸ್ವತಂತ್ರವಾಗಿ ಮಾತನಾಡಿಕೊಳ್ಳಲಾರಂಭಿಸಿದ್ದರೆ ಅರಸುಕುಲದ ಮಾತು ನಡೆಯುವುದು ಸಾಧ್ಯವಿದ್ದಿತೆ ? ಮೇಲ್ಕಾಣಿಸಿದಂತೆ ನಾನು ಮಾಡಿದ್ದೆಲ್ಲವೂ ತಮ್ಮ ರಾಜ್ಯದ ಭದ್ರತೆಗೆ ಕಾರಣವಲ್ಲವೆಂದು ತಮ್ಮ ದಿವ್ಯಚಿತ್ತಕ್ಕೆ ಎನಿಸಿದರೆ, ಒಂದೇ ಸಾರೆ ಏಕೆ, ಹತ್ತು ಬಾರಿ ನನ್ನನ್ನು ಶೂಲಕ್ಕೆ ಏರಿಸಿದರೂ ಆ ಶಾಸನವನ್ನು ನಾನು ಸಂತೋಷದಿಂದ ಸ್ವಾಗತಿಸುವೆನು. ಅಪ್ಪಣೆಯಾಗಬೇಕು. ಮಹಾಸ್ವಾಮಿ ! " ಎಂದು ಕರಟಕನು ತುಂಬ ವಿನೀತಭಾವದಿಂದ ಮೃಗೇಂದ್ರನ ಎದುರು ತಲೆವಾಗಿ ನಿಂತನು.

" ಸರಿ; ಸರಿ. " ಮೃಗೇಂದ್ರನೆಂದನು; " ಒಂದೇ ಕಡೆಯವರ ಹೇಳಿತಕ್ಕೆ ಕಿವಿಗೊಟ್ಟು, ಯಾವುದನ್ನೂ ಒಮ್ಮೆಲೆ ನಿರ್ಧರಿಸಕೂಡದೆಂಬ ಕಟ್ಟಳೆಯು ಅತ್ಯಂತ ಮಹತ್ವದ್ದಾಗಿದೆ. ನಾನು ಒಮ್ಮೆಲೆ ಹಾಗೆ ಮಾಡಿದ್ದರೆ ಎಂತಹ ಅನರ್ಥವಾಗುತ್ತಿತ್ತು ! ಓರ್ವ ಅತ್ಯಂತ ನಿಷ್ಠೆಯ ಸ್ವಾಮಿಭಕ್ತನನ್ನು ಕಳೆದುಕೊಂಡು, ಎಂದೂ ತುಂಬಿ ಬಾರದಂತಹ ಹಾನಿಗೆ ಈಡಾಗುತ್ತಿದ್ದೆನು. ಹಿಂದೆ ಅರಸುಗೈದ ಗಜೇಂದ್ರನ ಕುಲದವರು ತಮ್ಮ ರಾಜಪದವಿಯನ್ನು ಕಳೆದುಕೊಂಡುದು ಹೇಗೆ ? ತಮ್ಮ ಗಣಗಳ ಸಂಖ್ಯಾಬಲ, ತಮ್ಮ ಮಹಾದೇಹದ ಶರೀರಬಲ ಇದರ ಹೆಮ್ಮೆಯಲ್ಲಿ ಮೈಮರೆತು ಯಾವಾಗಲೂ ಮದೋನ್ಮತ್ತರಾಗಿ ನಡೆದುಕೊಳ್ಳುತ್ತಿದ್ದುದಕ್ಕಾಗಿಯೆ ಅಲ್ಲವೆ ? ಇವರಿಗೆ ತಾಳ್ಮೆಯಿಲ್ಲ; ಸಹನೆ

ಗೊತ್ತಿಲ್ಲ. ಒಲಿದರೆ ಸರ್ವಸ್ವವನ್ನೂ ಅರ್ಪಿಸುವುದು, ಪಕ್ರವಾದರೆ ತಟ್ಟನೆ ಸಿಟ್ಟು ತಲೆಗೇರುವುದು, ಇವರ ಸ್ವಭಾವ. ಎರಡೂ ಅತಿರೇಕ. ಇವರದು ಎಲ್ಲವೂ ಅತೀವ. ಹಿಡಿತ, ಹದ ಗೊತ್ತಿಲ್ಲ. ಸುಸ್ಥಿತಿಯ ನಾಲ್ಕು ದಿನಗಳು ದೊರೆವುದೇ ತಡ, ಒಡನೆಯೇ ಮನ ಬಂದಂತೆ ತಿಂದು ತೇಗುವರು. ಇವರಿಗೆ ಮದವೇರುವುದಕ್ಕೆ ತಡವಿಲ್ಲ. ದೇಹದ ಪ್ರಮಾಣದಲ್ಲಿ ಇವರಿಗೆ ಕಣ್ಣು ಸಣ್ಣವು; ದೂರ ದೃಷ್ಟಿಯಿಲ್ಲ. ದೂರಿನ ಹಾರಿಕೆಯಿಲ್ಲ. ನಾವು ಈ ದುರ್ಗುಣಗಳಿಂದ ದೂರವಿರುವುದರಿಂದಲೇ ಗಜಕುಲದ ತಲೆ ಮೆಟ್ಟಿ ನಿಂತಿದ್ದೇವೆ. ಕರಟಕರಾಯ, ನೀನೂ ನಮಗೆ ತಕ್ಕ ಮಂತ್ರಿಯಾಗಿರುವೆ. ಇದು ನಮ್ಮ ಭಾಗ್ಯ.

"ಇಂದು ನಮ್ಮ ಸುವರ್ಣ ಮಹೋತ್ಸವ ಪರಿಪೂರ್ತಿಯ ಸಮಾರಂಭದ ದಿನ. ಮೂರನೆಯ ದಿನವಾದರೂ ನೀನೂ ಭಾಗವಹಿಸುವುದಕ್ಕೆ ಬಂದುದರಿಂದ ನಮಗೆ ತುಂಬ ಸಂತೋಷ. ಹುಲಿರಾಯಾ, ಇಂದಿನ ಭೋಜನ ಸಮಾರಂಭಕ್ಕೆ ಈತನನ್ನೂ ಒಡಗೊಂಡು ಬಾ. ಅಲ್ಲಿ ರಾಜತಂತ್ರಪ್ರವೀಣ ಕರಟಕರಾಯನ ಯೋಗ್ಯತೆಗೆ ಕೊಡುಗೆಗಳನ್ನಿತ್ತು ಅವನನ್ನು ಮನ್ನಿಸುವ."

"ಮಹಾರಾಜರೇ," ಕರಟಕನು ಸ್ವಲ್ಪ ನೊಂದ ದನಿಯಿಂದ ಬಿನ್ನವಿಸಿದನು. "ನನಗೆ ಮೈಯಲ್ಲಿ ಸರಿಯಿಲ್ಲದುದಕ್ಕಾಗಿ, ಮೊದಲನೆಯ ದಿನ ತಮ್ಮ ಸಮಾರಂಭಕ್ಕೆ ಬರಲು ಅಸಮರ್ಥನಾದೆ. ಅದಕ್ಕಾಗಿ ನನಗಾದ ದುಃಖವು ಹೇಳಲಸದಳ. ಆ ದುಃಖವನ್ನು ಹೇಗೋ ನುಂಗಿಕೊಳ್ಳುವಷ್ಟರಲ್ಲಿ, ನನ್ನ ಮೇಲಣ ಆರೋಪ, ಅವುಗಳ ವಿಚಾರ-ವಿಮರ್ಶೆಗಳಿಂದ ನನ್ನ ಮೈಗೂ ಮನಸಿಗೂ ಆಗಿರುವ ಬಳಲಿಕೆ ಬೇರೆ. ನಾನು ಮತ್ತೆ ಆಡಳಿತದ ಹೊಣೆಯನ್ನು ಹೊರಲು ಸಮರ್ಥನಾಗಬೇಕಾದರೆ ಕೂಡಲೆ ವೈದ್ಯರಿಂದ ಔಷಧೋಪಚಾರಗಳನ್ನು ಹೊಂದಲೇ ಬೇಕು.

ಆದುದರಿಂದ ಮಹಾಸ್ವಾಮಿಯವರು ನನ್ನಲ್ಲಿ ದಯೆದೋರಿ ಇದೀಗ ನನ್ನ ಬಿಡಾರಕ್ಕೆ ಹೋಗಲು ಅನುಮತಿಸಬೇಕಾಗಿ ಬೇಡಿಕೊಳ್ಳುತ್ತೇನೆ. ನನ್ನ ಶಾರೀರಿಕ ಹಾಗೂ ಮಾನಸಿಕ ಅಸ್ವಸ್ಥತೆಯ ಬಳಲಿಕೆಯಿಂದ, ನರಳಿಕೆಯಿಂದ ಇಂದಿನ ರಸದೂಟದಲ್ಲಿ ವಿರಸವುಂಟಾದೀತಲ್ಲ, ಎಂಬ ಹೆದರಿಕೆಯಿದೆ. ಆದುದರಿಂದ ಈ ಸಮಾರಂಭದ ಆನಂದವನ್ನು ಅನುಭವಿಸಬೇಕೆಂಬ ಮನಸಿನ ಚಾಪಲ್ಯವನ್ನೂ ನನಗೆ ತಡೆದು ಹಿಡಿಯಬೇಕಾಗಿದೆ. ಆದಕಾರಣ ಈ ಪ್ರಸಂಗದ ನನ್ನ ಇಲ್ಲಮೆಯನ್ನು ಕ್ಷಮಿಸಬೇಕೆಂದು ಈ ಸೇವಕನು ತಮ್ಮಡಿಗಳಲ್ಲಿ ಬೇಡಿಕೊಳ್ಳುತ್ತಲಿದ್ದಾನೆ."

"ಕರಟಕರಾಯ, ನನ್ನ ರಾಜವೈದ್ಯ ಮೊಲರಾಯನನ್ನು ನಿನ್ನ ಆರೈಕೆಗಾಗಿ ಕಳುಹುತ್ತೇನೆ. ಆತನು ಓಷಧೀಶನ ವಾಹನನು. ಆದುದರಿಂದ ಆತನಿಗೆ ಗಿಡ—ಮೂಲಿಕೆಗಳೆಲ್ಲ ಗೊತ್ತು. ದಾದಿ ಆಡಕ್ಕನೂ ಅವನೊಡನೆ ನಿನ್ನ ಉಪಚಾರಕ್ಕಾಗಿ ಬರುವಳು. ಅವಳ ಹಾಲು ಬಹಳ ಗುಣಕಾರಿ. ಇವರ ಕೈಗುಣದಿಂದ ಬೇಗನೆ ನಿನಗೆ ಮೊದಲಿನ ಆರೋಗ್ಯವು ಪ್ರಾಪ್ತವಾಗುವುದೆಂದು ಹಾರೈಸುತ್ತೇನೆ; ಹೋಗಿ ಬಾ" ಎಂದು ನರಿಯಣ್ಣನಿಗೆ ಮೃಗೇಂದ್ರನು ಬೀಳ್ಕೊಟ್ಟನು.

---



## ಕೈವಾಡ ೬

---

ವೈದ್ಯ ಮೊಲರಾಯನೂ, ದಾದಿ ಆಡಕ್ಕನೂ ಮನಸ್ಸಿಲ್ಲದ ಮನಸಿನವರಾಗಿಯೆ ಹೊರಟರು. ಸಿಂಹರಾಜನು ಅವರ ಕೂದಲೂ ಕೊಂಕದ ಆಶ್ವಾಸನವನ್ನು ಇತ್ತುದರಿಂದ ಹಿಂಜರಿಯುತ್ತಲಿದ್ದ ಮನವನ್ನು ಬಿಗಿಹಿಡಿದುಕೊಂಡು, ಕರಟಕನೊಡನೆ ಒಪ್ಪಿ ಹೊರಟರು. ಕರಟಕರಾಯನು ದಾರಿಯುದ್ದಕ್ಕೂ ಪ್ರಸಂಗಾನುಸಾರವಾಗಿ ನಾನಾ ವಿಷಯಗಳ ಮಾತುಗಳನ್ನೆತ್ತಿ ತನ್ನ ಬುದ್ಧಿವೈಭವವನ್ನು ತೋರಿಸಿಕೊಂಡನು. ಓಷಧಿ—ವನಸ್ಪತಿಗಳ ಗುಣಧರ್ಮಗಳ ವಿಚಾರದಲ್ಲಿ ಮೊಲರಾಯನಿಗೆ ಮಾತಿಗೆ ಹಚ್ಚಿ, ಅವನಿಗೆ ಗೊತ್ತಿಲ್ಲದ ಒಂದೆರಡು ಹೆಚ್ಚಿನ ಸಂಗತಿಗಳನ್ನು ತಾನು ನಡುವೇ ಹೇಳಿ, ವೈದ್ಯರಾಜನನ್ನು ಬೆರಗುಗೊಳಿಸಿದನು. ಸಂಗೀತ, ಸಾಹಿತ್ಯ, ಚಿತ್ರಕಲೆ, ಧರ್ಮ, ತತ್ವಜ್ಞಾನ, ರಾಜ್ಯತಂತ್ರ ಮೊದಲಾದುವುಗಳ ಮಾತು ಬಂದಾಗ ಮೈಮರೆತು ತನ್ಮಯನಾಗಿ ನಡುವೆ ಗಕ್ಕನೆ ನಿಂತುಬಿಡುವನು. ಆ ಮಾತಿನ ಸೊಗಸೇ ಅಪೂರ್ವ. ಮುತ್ತು—ರತ್ನಗಳು ಸೂರೆಯಾದಂತೆ ಮನೋಹರ. ಯಾವುದೇ ವಿಷಯವಿರಲಿ, ಕರಟಕನ ದೃಷ್ಟಿಕೋನವು ಒಂದು ಹೊಸದು. ಮೊದಲು ಅಸಿಮಿಸಿಗೊಳ್ಳುತ್ತ ಹೊರಟ ಮೊಲರಾಯನೂ ಆಡಕ್ಕನೂ ಈಗ ಈತನ ಮಾತಿಗೆ ಮಾರುಹೋದರು. ಹಸಿವು ನೀರಡಿಕೆಗಳನ್ನು ಮರೆತರು. ಈ ಮಾತುಗಳನ್ನು ಕೇಳುತ್ತ ಆಜನ್ಮ ಈತನಲ್ಲಿ ಇರಲು ದೊರೆತವರೇ ಧನ್ಯರೆಂದು ಬಗೆದರು.

ಇಂತು ಮಾತಿನ ಹಿಗ್ಗಿನಲ್ಲಿ ನಗುತ್ತ ಕೆಲೆಯುತ್ತ ನರಿಯಣ್ಣನ ಗವಿಗೆ ಬಂದು ತಲುಪಿದರು. ದಾರಿಯ ದಣಿವೆ ಎನಿಸಲಿಲ್ಲ. ತೀರ

ಸ್ವಲ್ಪ ಹಾದಿ ನಡೆದಂತೆ ಭಾಸವಾಯಿತು. ಮನೆಗೆ ಬಂದೊಡನೆ ತನ್ನ ಹೆಂಡತಿಗೆ ಆಡಕ್ಕನ ಗುರುತು ಮಾಡಿಕೊಟ್ಟನು. ವೈದ್ಯರಾಜನನ್ನು ಕರೆದು 'ನನ್ನ ಮಗುವಿಗೆ ಕಾಯಿಲೆಯಾಗಿದೆ. ಈ ಕೋಣೆಯಲ್ಲಿ ಮಲಗಿದೆ. ಅದರ ನಾಡೀಪರೀಕ್ಷೆ ಮಾಡಿ ಏನಾಗಿದೆಯೆಂಬುದನ್ನು ನೋಡುವಿರಾ? ಬನ್ನಿ,' ಎಂದು ಒಳಗೆ ಕರೆದೊಯ್ದನು. ಆಡಕ್ಕನು ನಡುಮನೆಯಲ್ಲಿಯೇ ಯಜಮಾನಿಯೊಡನೆ ಔಪಚಾರಿಕ ಕ್ಷೇಮ–ಸಮಾಚಾರದ ನಾಲ್ಕು ಮಾತುಗಳನ್ನು ನಡೆಯಿಸಿದ್ದಳು. 'ದಣಿದಿದ್ದೀರಿ, ಒಂದಿಷ್ಟು ಉಂಡು ಕುಳಿತುಕೊಳ್ಳಿ'ರೆಂದು ಯಜಮಾನಿಯು ಒತ್ತಾಯ. 'ನನಗೆ ನಿಮ್ಮ ಊಟ ಉಂಡು ಗೊತ್ತಿಲ್ಲ; ಕ್ಷಮಿಸಿ. ತನ್ನ ತಿನಿಸೇ ಬೇರೆ' ಎಂದು ತುಂಬ ಸಂಕೋಚದಿಂದ ಹೇಳುತ್ತಿದ್ದಳು. 'ಅಯ್ಯೋ ನೀವು, ಎಷ್ಟು ದಾಕ್ಷಿಣ್ಯಪಟ್ಟುಕೊಳ್ಳುತ್ತೀರಲ್ಲ; ತುಂಬ ಒಳ್ಳೆಯವರು' ಎಂದು ಯಜಮಾನಿಯು ದಾದಿಯ ಹತ್ತಿರಕ್ಕೆ ಬರಲಾರಂಭಿಸಿದಂತೆ ಆಡಕ್ಕನು ಹಿಂದೆ ಹಿಂದೆ ಸರಿಯುತ್ತ 'ಒಡತಿಯೂ ದಾದಿಯೂ ಒಂದೇ ಆಸನದಲ್ಲಿ ಕುಳ್ಳಿರಲಾದೀತೆ? ನಿಮ್ಮ ಮರ್ಯಾದೆಯನ್ನು ನಾನು ಕಾಯಲೇಬೇಕು. ತಳತಳನೆ ಹೊಳೆವ ದೀಪದ ತೊಡೆ ಸೋಂಕಿ ಕುಳ್ಳಿರುವ ಚಪಲವು ಪತಂಗದ ಮರಣಕ್ಕೆ ಕಾರಣವಾಗುವುದಿಲ್ಲವೆ? ಅಹಾ! ತಾವು ಮೇಲೆಯೇ ಇರಿ; ನಾನು ಇಲ್ಲಿಯೆ ಕೂರುವೆನು.' ಎಂದು ತಲೆ ಅಲ್ಲಾಡಿಸಿ ನಸುನಗುತ್ತ ಮಾತನಾಡಿದಳು.

ಇನಿತರಲ್ಲಿ ಒಳಗಣಿಂದ ಒಂದು ಸಣ್ಣ ಗಂಟು ತಂದು ದಾದಿಯ ಮುಂದಿರಿಸಿ, ಬಹಳ ಅವಸರದ ದನಿಯಲ್ಲಿ ಕರಟಕನು ಮಾತನಾಡಿದನು. "ಅಕ್ಕಾ, ವೈದ್ಯರಾಜರು ಇಲ್ಲಿಯ ವರೆಗೆ ಬಂದುದೆಲ್ಲವೂ ವ್ಯರ್ಥವಾಗುವ ಹೊತ್ತು ಬಂದಿದೆ! ಅವರು ಬರುವಾಗ ಅವಶ್ಯಕವಾಗಿ ತರಬೇಕಾಗಿದ್ದ ಮಾತ್ರೆ, ಗುಳಿಗೆಗಳ ಸಂದುಕವನ್ನು ಮರೆತು ಬಂದಿರುವರಂತೆ! ನೀನು

ವೈದ್ಯರ ಮನೆಗೆ ಹೋಗಿ ಆ ಔಷಧಿಗಳ ಪೆಟ್ಟಿಗೆಯನ್ನಷ್ಟು ತಂದರೆ ಉಪಕಾರವಾಗುವುದು. ಹಾ! ಅದೇ ಕಾಲಕ್ಕೆ ಈ ಸಣ್ಣ ಗಂಟನ್ನೊಂದು ಮಹಾರಾಜರವರ ಅಡಿದಾವರೆಗಳಲ್ಲಿ ಸಮರ್ಪಿಸು. ಇದರಲ್ಲಿ ನಾನು ಮಹಾರಾಜರವರಿಗೆ ಈ ಮಹಾಸಮಾರಂಭದ ಕಾಲಕ್ಕೆ ಸಲ್ಲಿಸಬೇಕಾಗಿದ್ದ ನನ್ನ ಬಡವನ ಯೋಗ್ಯತೆಗೆ ತಕ್ಕ, ಆದರೂ ಅಮೌಲಿಕವಾಗಿರುವ ಒಂದು ವಸ್ತುವನ್ನು ಕಾಣಿಕೆಯಾಗಿ ಇರಿಸಿದ್ದೇನೆ. ಇವೆರಡೂ ಕೆಲಸಗಳನ್ನು ಮಾಡಿಕೊಂಡು, ಅಕ್ಕಾ ಸರ‍್ರನೆ ಹೋಗಿ ಭರ‍್ರನೆ ಬರುವೆಯಾ? ವೈದ್ಯರು ನನ್ನ ಮಗನ ಎದೆ, ನಾಲಗೆಗಳ ಪರೀಕ್ಷೆ ನಡೆಯಿಸಿದ್ದಾರೆ. ಕಟ್ಟಿನ ಜ್ವರವೆಂದು ಅವರಿಗೆ ಸಂದೇಹವುಂಟಾಗಿದೆಯಂತೆ. ಔಷಧಿಯಂತೂ ಬೇಗನೆ ಬೇಕು."

ಆಡಿಗೆ ಅದೇ ಬೇಕಾಗಿತ್ತು. ಅಲ್ಲಿಂದ ಕಾಲ್ದೆಗೆಯಲು ಏನಾದರೂ ನೆಪವು ಸಿಕ್ಕುವುದೇ? ಎಂದು ದಾರೀ ನೋಡುತ್ತಿತ್ತು. ನರಿಯಣ್ಣನು ಬೆಸಕೈದುದೆ ನಿಮಿತ್ತ, ಹೊರಟೇ ಬಿಟ್ಟಿತು. ಗವಿಯಿಂದ ಕೂಗಳತೆಯ ಹೊರಗೆ ಬಂದೊಡನೆ, ದುಡುಕಿನಿಂದ ಓಡಿಬರುವಾಗ ಬಿಗಿಹಿಡಿದಿದ್ದ ಉಸಿರನ್ನು ನಿಡಿದಾಗಿ ಹೊರಗೆ ಬಿಟ್ಟಿತು. ಆಗ ಜೀವಕ್ಕೆ, ಎದೆಮೇಲಣ ಹೆಗ್ಗಲ್ಲನ್ನು ಕೆಳಗೆ ಚಲ್ಲಿದಷ್ಟು ಹಗುರೆನಿಸಿತು. "ತನ್ನ ಸಮತೂಕದ ಹೆಂಡತಿಯನ್ನೇ ಕೈಹಿಡಿದಿದ್ದಾನೆ, ಕರಟಕರಾಯ!" ಆಡಕ್ಕನೆಂದಳು. "ಅಬ್ಬಾ! ನನ್ನ ತಿಂಡಿತೀರ್ಥದ ಚಿಂತೆ ಎನಿತು ಅವಳಿಗೆ! ಎಷ್ಟು ಸಮಾನ ಭಾವ! ಎಂತಹ ಒಲವು! ನಾನೂ ಅಷ್ಟೆ ನಯ, ವಿನಯದಿಂದ ಮಾತನಾಡಿ, ಅವಳಿಂದ ನಾಲ್ಕು ಮೊಳ ದೂರ ಉಳಿದೆ; ಬದುಕಿದೆ! ಆದರೆ ಬರಿ ಮೆಲುಮಾತಿನ ಬೆಲೆ ಯಾರಿಗೆ? ಆ ಮಿದುಮಾತಿನ ಒಡನೆಯೆ ನನ್ನ ತಲೆಯನ್ನು ಕೊಡಹುತ್ತ ಮೊನೆಯಾದ ಈ ಕೋಡುಗಳೂ ನನಗೆ ಉಂಟೆಂಬುದನ್ನು ಸೂಚಿಸಿದೆ. ಇನಿತರಲ್ಲಿ

ನರಿಯಣ್ಣ ಬಂದು ನನ್ನನ್ನು ಏಕೋ ಅಟ್ಟಿಬಿಟ್ಟನು. ಈಗಂತೂ ಪಾರಾದೆನೆಂದು ತೋರುತ್ತದೆ. ಆತನೇನು ಬಲೆಯನ್ನೊಡ್ಡಿರುವನೋ! ಮುಂದಿನ ಮಾತು ಮುಂದೆ. ಆಗ ನೋಡುವ. ಈ ಲೋಕದಲ್ಲಿ ಮಾತಿಗೂ ಕೃತಿಗೂ ಇರುವ ವ್ಯಸ್ತಪ್ರಮಾಣವನ್ನು ಮರೆತರೆ ನಮ್ಮಂತ ಹರಿಗೆ ಬದುಕುವ ಆಸೆಯೆ ಇಲ್ಲ........ಓಹೋ! ಈಗ ಸಹ ನರಿಯಣ್ಣನು ತನ್ನನ್ನು ಬೆನ್ನಟ್ಟಿ ಬಂದರೂ ಬರಬಹುದು" ಎಂಬ ಕೊನೆಯ ವಿಚಾರವು ಮಿಂಚಿದೊಡನೆ ಮತ್ತೆ ಓಟ ನಡಿಸಿತು.

ಸಿಂಹರಾಯನು, ಕರಟಕನ ವ್ಯಾಜ್ಯವೊಂದು ಸರಿಯಾಗಿ ಬಗೆಹರಿದಿತೆಂದು, ಆ ಚಿಂತೆ ದೂರವಾದುದಕ್ಕೆ ಇದೀಗ ಸಮಾಧಾನಪಟ್ಟುಕೊಂಡಿದ್ದನು. ಇದರಿಂದ ಸುವರ್ಣ ಮಹೋತ್ಸವವೂ ಯಶಸ್ವಿಯಾಗಿ ಕೊನೆಗಂಡಂತಾಯಿತೆಂದು ಭಾವಿಸಿದ್ದನು. ಸಾಮಂತರೂ, ಸರದಾರರೂ ಮನ್ನೆಯರ ಮೊದಲಾದವರು ಮೇಜವಾನಿಯನ್ನು ಮುಗಿಸಿ ಅರಸನಿಗೆ ಬೀಳ್ಕೊಂಡು ತಮ್ಮ ತಮ್ಮ ಗುಡಾರಗಳಿಗೆ ಹೋಗಿ ಬಹಳ ಹೊತ್ತು ಸಂದಿರಲಿಲ್ಲ. ಅಷ್ಟರಲ್ಲಿ ಏದುತ್ತ ಮುಗ್ಗರಿಸುತ್ತ ಲಗುಬಗೆಯಿಂದ ಆಡಕ್ಕನು ಬಂದು ಮೃಗೇಂದ್ರನ ಮುಂದೆ ಅಡ್ಡಬಿದ್ದಳು.

"ಏನು ಸುದ್ದಿ?" ಸಿಂಹರಾಜನು ಕೇಳಿದನು; "ನೀನು ಕರಟಕನ ಆರ್ಥಿಕೆಯ ದಾದಿಯಾಗಿ ಹೋಗಿರಲಿಲ್ಲವೆ?"

"ಅಹುದು, ಜೀಯಾ;" ಆಡಕ್ಕನೆಂದಳು. "ಆದರೆ ಮಂತ್ರಿವರ್ಯರು, ತಮಗೆ ಸುವರ್ಣ ಮಹೋತ್ಸವದ ಕಾಣಿಕೆಯನ್ನು ಸಮರ್ಪಿಸುವ ಹೊತ್ತು ಮೀರಿ ಹೋಗಬಾರದೆಂದು ನಿಂತಕಾಲ ಮೇಲೆಯೇ ನನ್ನನ್ನು 'ಇದನ್ನು ಮಹಾಸನ್ನಿಧಾನದಲ್ಲಿ ಅರ್ಪಿಸು,' ಎಂದು ಆಜ್ಞಾಪಿಸಿ ಕಳುಹಿದ್ದಾರೆ; ಸ್ವೀಕರಿಸುವ ಕೃಪೆಯಾಗಬೇಕು."

ಮೃಗೇಂದ್ರನು, ಕರಟಕನ ಸ್ವಾಮಿನಿಷ್ಠೆಯನ್ನು ಮನದಲ್ಲಿಯೆ ಕೊಂಡಾಡುತ್ತ ಹತ್ತಿರದ ಬೆಂಗಾವಲಿಗರಿಗೆ ಆ ಮುಡಿವನ್ನು ಬಿಚ್ಚಿ ನೋಡ ಹೇಳಿದನು. ಅದು ತಾನು ಅಭಯದ ಆಶ್ವಾಸನವನ್ನಿತ್ತು ಕಳುಹಿದ ಮೊಲನ ತಲೆ ಎಂಬುದನ್ನು ನೋಡಿ, ಸಿಂಹರಾಜನು ಬಾಲವನ್ನು ನೆಲಕ್ಕೆ ಅಪ್ಪಳಿಸಿ, ಕೆರಳಿ ಕಿಡಿಕಿಡಿಯಾದನು. " ಈಗಿಂದ ಈಗಲೇ ಹೋಗಿ ಆ ಮೋಸಗಾರ ಕರಟಕನನ್ನು ಸೆರೆಹಿಡಿದು ನೀವು ತರಲೇಬೇಕು; ಇನ್ನು ಆತನ ಮಾತಿನ ಮಾಟಕ್ಕೆ ಸ್ವಲ್ಪವೂ ಎಡೆಗೊಡಲೇ ಕೂಡದು; ತ್ವರೆ ಮಾಡಿರಿ " ಎಂದು ತನ್ನ ಅಂಗರಕ್ಷಕರಿಗೆ ಅಪ್ಪಣೆಯನ್ನಿತ್ತನು.

ಕರಟಕನನ್ನು ಬಂಧಿಸಿ ತಂದುದಾಯ್ತು. ಅರಸನ ಎದುರು ನಿಲ್ಲಿಸಿದುದಾಯ್ತು. ಹಿಂದಿನಂತೆ ಮತ್ತೆ ಬಿಡುಗಡೆ ಹೊಂದುವುದಕ್ಕೆ ಅನುವು ದೊರೆಯಬಾರದೆಂದು ತೋಳ, ಏದು, ಕರಡಿ, ಕಾಮಿ ಮೊದಲಾದವರೆಲ್ಲ ಹಾರೈಸುತ್ತಿದ್ದರು. " ಮೊನ್ನೆ ಬಿಡುಗಡೆ ಹೊಂದಿದ ಬಳಿಕ ಈತನಿಗೆ ಮತ್ತೆ ಕೂಡಲೇ ಬಂಧನವಾಯ್ತು; ಚೆನ್ನಾಯ್ತು. ಇಲ್ಲದಿದ್ದರೆ ಇವನು ನಮ್ಮನ್ನು ಪರಿಪರಿಯಾಗಿ ಗೋಳಾಡಿಸಿ ಸೇಡು ತೀರಿಸಿಕೊಳ್ಳದೆ ಬಿಡುತ್ತಿದ್ದಿಲ್ಲ. ದೇವರು ನಮ್ಮ ಮಹಾರಾಜರಿಗೆ ಸ್ಥಿರಬುದ್ಧಿಯನ್ನಷ್ಟು ದಯಪಾಲಿಸಿದರೆ ಅದೆಷ್ಟು ಒಳಿತಾದೀತು ! " ಎಂದು ಮುಂತಾಗಿ ತಮ್ಮ ತಮ್ಮೊಳಗೆ ಗುಣು ಗುಣು ನಡಿಸಿದ್ದರು.

" ಕರಟಕಾ ! " ಮೃಗೇಂದ್ರನು ಗರ್ಜಿಸಿದನು " ನಿನ್ನ ಮಾತಿಗೂ ಮಾಳ್ಕೆಗೂ ಏನಿದು ವ್ಯತ್ಯಾಸ! ನಿನಗೆ ಬೇನೆಯುಂಟೆಂದೆ. ಅದಕ್ಕೆ ಮದ್ದು ಕೊಡವುದಕ್ಕಾಗಿ ವೈದ್ಯನನ್ನು ಕಳುಹಿದರೆ ಆತನನ್ನೇ ತಿನ್ನಬೇಕೆ ? "

" ಅಯ್ಯೋ, ನನ್ನ ದುರ್ದೈವವೇ ! " ಕರಟಕನು ದೈನ್ಯಭಾವವನ್ನು ನಟಿಸುತ್ತ ಉಸಿರಿದನು; " ಮತ್ತೆ ಹಿಂದಿನ ಕತೆಯೇ ! ನನ್ನ ವಿಷಯವಾಗಿ ಎಲ್ಲರೂ ಹೀಗೆ ವಿಪರೀತವಾಗಿ ಹೇಳುವವರೇ. ಉಪಕಾರ ಮಾಡಬಂದವರಿಗೆ ಅಪಕಾರ ಮಾಡಿ ನಾನು ಯಾವ ನರಕಕ್ಕೆ ಹೋಗಲಿ,

ಸ್ವಾಮಿ? ಈ ದಾದಿಯೆ ಕೊಂದಿರಬೇಕು, ಮೊಲರಾಯನನ್ನು. ಹೆಣ್ಣಿನ ನೆಲೆ, ಕುದುರೆಯ ನಡೆ ಗೊತ್ತಾಗುವುದಿಲ್ಲವೆಂಬ ಗಾದೆಯಿದೆ. ಇಲ್ಲಿಯೆ ಇದ್ದಾಳೆ; ಆಡಕ್ಕನನ್ನು ವಿಚಾರಿಸಿರಿ. ಯಾರದೊ ಪಾಪ ಯಾರಿಗೊ ಬಡಿದು ಕೊಂಡಿತಂತೆ. ಅಂತಹ ಅನ್ಯಾಯವು ಪ್ರಭುಗಳ ರಾಜ್ಯದಲ್ಲಿ ಆಗದಿರಲಿ."

"ವಂಚನೆ ಸಾಕು;" ಮೃಗೇಂದ್ರನೆಂದನು. "ಕರಟಕಾ, ನಿನ್ನನ್ನು ನಾನು ಮಂತ್ರಿಪದದಿಂದ ತಳ್ಳಿದ್ದೇನೆ. ಆ ಸ್ಥಾನದಲ್ಲಿ ನಿನ್ನ ಅಣ್ಣ ದಮನಕರಾಯನನ್ನು ನಿಯಮಿಸುತ್ತೇನೆ. ನಿನ್ನ ಅಣ್ಣನಿಗೆ ನಿನ್ನಂತೆ ಬಾಯಿಯಿಲ್ಲವೆಂದು ಆತನನ್ನು ನಾನು ಕಡೆಗಣಿಸಿದ್ದೆ. ಆದರೆ ಆತನ ಬೆಲೆ ನನಗೆ ಈಗ ತಿಳಿದುಬಂದಿತು; ನಿನ್ನ ಬಣ್ಣ ಹೊರ ಬಂದಿತು. ಸದ್ವೃತ್ತಿ ಸನ್ನಿಷ್ಠೆಗೆ ಒಳಗಾಗದ ಬುದ್ಧಿ ವಾರಾಂಗನೆ. ಭಾವನೆಗಳು ಪವಿತ್ರವಿಲ್ಲ ದವರ ಬುದ್ಧಿವಂತಿಕೆಯ ದುರುಪಯೋಗವಾಗುವುದು ನಿಶ್ಚಿತ; ಭಾವನೆ ಗಳು ಶುದ್ಧವಿಲ್ಲದ ವರೆಗೆ ಪರೋಪಕಾರ, ಲೋಕಸೇವೆಗಳ ಸೋಗಿನಲ್ಲಿ ಎಲ್ಲರೂ ಸ್ವಾರ್ಥವನ್ನು ಸಾಧಿಸುವವರೇ. ನಿನ್ನ ಬಾಯ್ಬಡಕತನಕ್ಕೆ— ನಿನ್ನ ಡೊಂಬವಿದ್ಯೆಗೆ ನಾನು ಮೋಸ ಹೋದೆ. ಹೆಚ್ಚು ಆಡುವ ಭರದಲ್ಲಿ ಸುಳ್ಳು ಎಲ್ಲಿ ನುಸುಳಿಕೊಂಡು ಒಳಸೇರುವುದೊ ಎಂದು ದಮನಕನು, ತೂಗಿ ಮಾತನಾಡುವನೆಂಬ ವಿಚಾರವು ನನಗೆ ಮೊದಲು ಹೊಳೆಯಲಿ ಇಲ್ಲ. ಆತನು ಮೂಕನೆಂದು ಬಗೆದು ಮಂತ್ರಿಪದವನ್ನು ನಿನಗೆ ಕೊಟ್ಟೆ. ಮಾತು ಕಡಿಮೆಯಾದರೆ ಎಗ್ಗತನ ಪಾಲಿಗೆ ಬರುವುದು; ಮಾತು ಹೆಚ್ಚಾ ದರೆ ವಾಚಾಲತನದ ಬಿರುದು ದೊರೆಯುವುದು. ಇವೆರಡು ತುದಿಗಳ ಸುವರ್ಣ–ಮಧ್ಯವನ್ನು ಅರಿತುಕೊಂಡ ಹಿತ–ಮಿತವಚನಿಯಾದ ದಮನ ಕನೇ ಮಂತ್ರಿಪದಕ್ಕೆ ತಕ್ಕವನು. ತನ್ನ ದುರ್ಭಾವನೆಗಳ ದಮನ ಮಾಡುವ ಸಾಮರ್ಥ್ಯವಿಲ್ಲದವರ ಬುದ್ಧಿವಂತಿಕೆಯು ಲೋಕನಾಶಕ್ಕೆ ಕಾರಣವಾಗು ವುದು. ಬುದ್ಧಿಯು ಒಂದು ಶಸ್ತ್ರವಿದ್ದಂತೆ. ಅದರಿಂದ ಲೋಕವನ್ನು ಕಾಯಬಹುದು; ಇಲ್ಲವೆ, ಕೊಲ್ಲಲೂ ಬಹುದು.

“ ಕೇವಲ ನಿನ್ನ ಒಡಲು ತುಂಬಿಕೊಳ್ಳುವುದಕ್ಕಾಗಿ ಮೋಸದ ಕಾಯಕವನ್ನೇ ಕೈಕೊಂಡ ನೀನು ಅತ್ಯಂತ ಕಠೋರ ಶಿಕ್ಷೆಗೆ ಯೋಗ್ಯನಾಗಿರುವೆ. ಮೊಲವನ್ನು ಕೊಂದು ಅದನ್ನು ಆಡಕ್ಕನ ಕೊರಳಿಗೆ ಕಟ್ಟಿದೆ! ಆದರೆ ಆ ಆರೋಪವು ನಿನ್ನ ತಲೆಯ ಮೇಲೆಯೆ ಹೊತ್ತಿದೆ. ಏಕೆಂದರೆ ಆಡಕ್ಕನು ತೃಣ-ಧಾನ್ಯಾದಿಗಳಿಂದಲೇ ಜೀವಿಸುವ ವ್ರತವನ್ನು ಕೈಕೊಂಡುದು ಲೋಕಪ್ರಸಿದ್ಧವಾಗಿದೆ. ಮಾಂಸವೆಂದರೆ ಅವಳು ಮೂಗು ಮುಚ್ಚಿಕೊಳ್ಳುವಳು. ಅಂತಹಳು ಮೊಲನನ್ನು ಕೊಂದಳೆಂದು ಸಾಧಿಸುವ ನಿನ್ನ ಸಾಹಸವು ಎಂತಹದು ! ಕರಟಕಾ, ನಿನ್ನ ಆರೈಕೆಗಾಗಿ ಬಂದ ಇವರನ್ನು ದಾರಿಯಲ್ಲಿ ಬೆಲ್ಲದಂತಹ ಮಾತುಗಳಿಂದ ಹೇಗೆ ಮರುಳುಗೊಳಿಸಿದೆಯೆಂಬುದನ್ನು ಆಡಕ್ಕನು ನನಗೆ ಹೇಳಿದ್ದಾಳೆ.

“ ನಂಬಿಸಿ ತಿಂಬುವ ವಿದ್ಯೆಯಲ್ಲಿ ಕರಟಕಾ, ನೀನು ಚೆನ್ನಾಗಿ ಬಲ್ಲಿದನಾಗಿರುವೆ. ಆದರೆ ಇದು ಹೇಡಿತನವು; ಹೀನತನವು. ನಿನಗೆ ಏರಿ ಹೋಗುವುದಿದ್ದರೆ ಹಾಗೆ ಹೇಳಿ ಕೇಳಿ ಮಾಡು. ನಿನ್ನ ವಿರೋಧವನ್ನು ಮೊದಲು ಸಾರು. ಬೆನ್ನಲಿ ಇರಿವ, ನಂಬಿಸಿ ತಿಂಬುವ ವಂಚಕತನವು ನಿಂದ್ಯವಾದುದು. ಸಂಪಾದನೆಗಾಗಿ ‘ ಏರಿ’ ಹೋದರೆ ಕಾಳಗವೆನಿಸುವುದು. ಹೇಳದೆ ಮಾಡಿದರೆ ಕಳವು ಆಗುವುದು. ಲೋಕಕ್ಕೆಲ್ಲ ಹೇಳಿ ಕೈಹಿಡಿದರೆ ಮದುವೆಯಾಗುವುದು; ಹೇಳದೆ ಆದರೆ ಲೋಕಾಪವಾದ ಬರುವುದು. ಇದು ಲೋಕರೀತಿ.

“ ಕರಟಕಾ, ನಿನ್ನ ನಡೆ ಲೋಕವಿರುದ್ಧವಾಗಿದೆ. ಆದುದರಿಂದ ನೀನು ಲೋಕಬಾಹಿರನೆಂದು ನಾನು ಇಂದು ಸಾರುತ್ತೇನೆ. ನಿನ್ನೊಡನೆ ಯಾವ ಪಂಗಡವೂ ಕೂಡಿ ನಡೆಯದು. ನಿನ್ನ ದುಷ್ಕೃತ್ಯಗಳ ದುಷ್ಪರಿಣಾಮಗಳನ್ನು ನೀನು ಈ ಜನ್ಮದಲ್ಲಿಯೇ ಅನುಭವಿಸುವುದು ಅಗತ್ಯ. ನಿನಗೆ ಈಗಲೆ ಶೂಲಕ್ಕೆ ಏರಿಸಿದರೆ ಆ ಸಂಕಷ್ಟಗಳನ್ನು ಯಥಾಕ್ರಮದಲ್ಲಿ ಅನುಭವಿಸುವುದು ತಪ್ಪಿಬಿಡುತ್ತದೆ. ಸಂಕಷ್ಟಗಳನ್ನು ಅನುಭವಿಸುವಾಗ

ಬೆಂದು ಬೆಂಡಾಗಿ ನಿನ್ನ ಮನಸಿಗೆ ಅವಶ್ಯಕವಾದ ಶಿಕ್ಷಣವು ದೊರೆಯ ಬೇಕಾಗಿದೆ. ಇದೇ ನಿಜವಾದ ಶಿಕ್ಷೆ. ಆದಕಾರಣ ನಿನ್ನನ್ನು ಗಲ್ಲಿಗೆ ಹಾಕುವುದಿಲ್ಲ. ನಿನ್ನನ್ನು ನಮ್ಮ ರಾಜ್ಯದಿಂದ ಹೊರದೂಡಿದ್ದೇವೆ.

"ಇನ್ನು ಮೇಲೆ ಗೃಹಮಹತ್ತರ ಅಥವಾ ಮನೆವೆರ್ಗಡೆಯ ಸ್ಥಾನಕ್ಕೆ ನಂಬಿಯಣ್ಣನೆಂದು ಹೆಸರಾದ ದಮನಕನ ಪೀಳಿಗೆಯವರನ್ನೆ ನಾವೂ ನಿಯಮಿಸತಕ್ಕದ್ದು. ಇವನ ಬಳಗದವರ ಪ್ರಾಮಾಣಿಕವಾದ ಇರವನ್ನು ನೋಡಿ ಮಾನವರು ನಮ್ಮ ಮೊದಲೇ ತಮ್ಮ ಗೃಹರಕ್ಷಣೆಯ ಖಾತೆಯನ್ನು ಇವರಿಗೆ ಎಂದೊ ಒಪ್ಪಿಸಿ ಕೊಟ್ಟಿದ್ದಾರೆ. ದಮನಕನ ಪೀಳಿಗೆಗೆ ಸಿಕ್ಕುವ ಮಾನ–ಮರ್ಯಾದೆಗಳನ್ನು ಕಂಡು, ತೋಳಪ್ಪನೆ ಹಲವು ಪಿಳ್ಳೆಗಳೂ ಆ ಗೌರವವನ್ನು ಪಡೆಯುವುದಕ್ಕಾಗಿ ನಂಬಿಕೆಯವಾಗಿ ಬಾಳುವುದಕ್ಕೆ ಹವಣಿಸುತ್ತಿರುವವೆಂದು ಇದೀಗ ಬಂದ ವರ್ತಮಾನವನ್ನು ಕೇಳಿ ನನಗೆ ಹಿಡಿಸಲಾರದಷ್ಟು ಹಿಗ್ಗು ಆಗಿದೆ. ಪ್ರಜೆಗಳೆ, ಇನ್ನು ಮೇಲೆ ದಮನಕನು ನಮ್ಮ ಮಂತ್ರಿಯಾದುದರಿಂದ ಸ್ವೈರಾಚಾರಕ್ಕೆ ಎಡೆಯಿಲ್ಲ. ಎಲ್ಲರೂ ಸುಖಶಾಂತಿಯಿಂದ ಬದುಕಲಿ; ಬಾಳಲಿ."

ಮೃಗೇಂದ್ರನ ಈ ಉಪನ್ಯಾಸದಿಂದ ಎಲ್ಲರಿಗೂ ತುಂಬ ಸಮಾಧಾನವಾಯ್ತು. ಪಶು-ಪಕ್ಷಿಗಳೆಲ್ಲವೂ ತಮ್ಮ ತಮ್ಮ ಬಿಡಾರಕ್ಕೆ ಹೋದುವು. ಕರಟಕನ ಬಳಗದವರು ಮಾತ್ರ ನಾಚಿಕೆಯಿಂದ ತಮ್ಮ ಮೋರೆ ಕೆಳಗೆ ಮಾಡಿಕೊಂಡು ಎತ್ತಲೋ ಮಾಯವಾದರು. ಅವರ ಸಂತತಿಯವರು ಕೆಲವಾರೆ ಮಸಣದ ಕೆಲಬಲದಲ್ಲಿ ಈಗಲೂ ಕಾಣಿಸಿಕೊಳ್ಳುವರು; ತಮ್ಮ ದುರವಸ್ಥೆಗಾಗಿ ಆರ್ತಧ್ವನಿಯಿಂದ ಕೂಗಿಕೊಳ್ಳುವರು. ಇವರ ಈ ಒರಲು, ಮೋಸಗಾರರ ಪಾಡು ಕೊನೆಗೆ ಹೇಗೆ ಆಗುವುದೆಂಬುದನ್ನು ಲೋಕಕ್ಕೆ ಸಾರುತ್ತಿರುವುದುಲ್ಲ.